ಸಾಹಿತ್ಯವಾಹಿನಿ–೩೩

# ಮನೋವಿಜ್ಞಾನ


ಡಾ || ಟಿ. ರಾಘವೇಂದ್ರರಾವ್

ಎಂ.ಎ., ಎಲ್.ಎಲ್.ಬಿ., ಪಿಎಚ್.ಡಿ.,



ಡಿ.ವಿ.ಕೆ. ಮೂರ್ತಿ

ಕೃಷ್ಣಮೂರ್ತಿಪುರಂ : : ಮೈಸೂರು–೪

# ಮನೋವಿಜ್ಞಾನ

ಪ್ರಪಂಚದ ಸೃಷ್ಟಿಯಲ್ಲಿ ಅನೇಕ ಅಂತಸ್ತುಗಳಿಗೆ ಸೇರಿದ ಪ್ರಾಣಿಗಳಿವೆ. ಮನುಷ್ಯನಾದವನೂ ಇಂತಹ ಪ್ರಾಣಿಗಳಲ್ಲಿ ಮೇಲಿನ ಅಂತಸ್ತಿಗೆ ಸೇರಿದವನೆಂಬ ಭಾವನೆ ಇದೆ. ಈ ರೀತಿಯಾದ ಭಾವನೆಗೆ ಒಂದು ಮುಖ್ಯವಾದ ಕಾರಣವಿದೆ. ಅದೇನೆಂದರೆ, ಮನುಷ್ಯನ ಅಂತಸ್ತಿಗೆ ಸೇರಿದವರು ತಮ್ಮ ವ್ಯವಹಾರಗಳನ್ನು ಉತ್ತಮವಾದ ರೀತಿಯಲ್ಲಿ ನಡೆಸಿಕೊಂಡು ಹೋಗುತ್ತಾರೆ. ಕೆಳಗಿನ ಮಟ್ಟಕ್ಕೆ ಸೇರಿದ ಪ್ರಾಣಿಗಳಲ್ಲಿ ಇಂತಹ ವೈಶಿಷ್ಟ್ಯದಿಂದ ಕೂಡಿದ ವ್ಯವಹಾರವು ಕಂಡುಬರುವುದಿಲ್ಲ. ಇದಕ್ಕೆ ಮನುಷ್ಯನಲ್ಲಿರುವ ಮಸ್ತಿಷ್ಕದ ಬೆಳವಣಿಗೆಯೇ ಕಾರಣವೆಂದು ವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ಪ್ರಾಣಿಗಳು ಸೃಷ್ಟಿಯಲ್ಲಿ ಯಾವ ಅಂತಸ್ತಿಗೇ ಸೇರಿದ್ದರೂ ಅವುಗಳಲ್ಲಿ ಮಾನಸಿಕ ಕ್ರಿಯೆಯು ನಡೆಯುತ್ತದೆ. ಅವುಗಳ ಮಾನಸಿಕ ಕ್ರಿಯೆಗಳು ವರ್ತನೆಯ ಮೂಲಕ ವ್ಯಕ್ತವಾಗುತ್ತವೆ. ಈ ರೀತಿಯಾಗಿ ವ್ಯಕ್ತವಾಗುವ ವರ್ತನೆಯನ್ನು ವಿವರಿಸುವುದೇ ಮನೋವಿಜ್ಞಾನಿಗಳ ಕೆಲಸ. ಇಂತಹ ವಿವರಣೆಯಿಂದ ಕೂಡಿದ ವಿಭಾಗವೇ ಮನೋವಿಜ್ಞಾನ.

ಮನೋವಿಜ್ಞಾನದ ಕ್ಷೇತ್ರದಲ್ಲಿ ಪ್ರಾಣಿಗಳ ವರ್ತನೆಗೆ ಸಂಬಂಧಿಸಿದಂತೆ ವಿಮರ್ಶೆಯನ್ನು ನಡೆಸುವುದು ಇತ್ತೀಚೆಗೆ ಬೆಳೆದು ಬಂದ ಪದ್ಧತಿ. ಇದಕ್ಕೆ ಮುಂಚೆ, ಮನೋವಿಜ್ಞಾನವನ್ನು ವರ್ತನ–ವಿಜ್ಞಾನವೆಂದು ಭಾವಿಸುವುದು ರೂಢಿಯಲ್ಲಿರಲಿಲ್ಲ. ಆಧುನಿಕ ಮನೋವಿಜ್ಞಾನವು ಬೆಳೆದುಬಂದ ರೀತಿಯನ್ನು ವಿಶ್ಲೇಷಿಸಿದರೆ ಈ ಅಂಶವು ಸ್ಪಷ್ಟವಾಗಿ ತಿಳಿದುಬರುತ್ತದೆ. ಮೊಟ್ಟ

ಮೊದಲು ಮನೋವಿಜ್ಞಾನವು ದರ್ಶನಶಾಸ್ತ್ರದ ಒಂದು ಶಾಖೆಯಾಗಿದ್ದಿತು. ಆ ಕಾಲದಲ್ಲಿ ಮನಶ್ಶಾಸ್ತ್ರವೆಂದು ಕರೆಯಲ್ಪಡುತ್ತಿದ್ದ ಈ ಕ್ಷೇತ್ರದಲ್ಲಿ ವಿಶೇಷವಾಗಿ ಮನುಷ್ಯನ ದೇಹದಲ್ಲಿ ವಾಸಿಸುವ ಆತ್ಮನ ಕ್ರಿಯೆಗಳ ವಿಚಾರವಾಗಿ ವಿಮರ್ಶೆಯು ನಡೆಯುವುದೆಂಬ ನಂಬಿಕೆಯು ಜನರಲ್ಲಿದ್ದಿತು. ದರ್ಶನ ಶಾಸ್ತ್ರದಲ್ಲಿ ಪ್ರಸಿದ್ಧರಾದವರು ಕೊಡುವ ಹೇಳಿಕೆಗಳ ಆಧಾರಗಳನ್ನನುಸರಿಸಿ ಮನಶ್ಶಾಸ್ತ್ರದ ಬೆಳವಣಿಗೆಯು ಮುಂದುವರಿಯುತ್ತಿದ್ದಿತು. ಇದರಿಂದ ಪ್ರಾಣಿಗಳ ಮಾನಸಿಕ ಕ್ರಿಯೆಗಳು ನಡೆಯುವ ರೀತಿಯನ್ನು ಅಳೆಯುವುದಕ್ಕೆ ಅವಕಾಶವಿರಲಿಲ್ಲ. ಕೆಲವು ವರ್ಷಗಳು ಕಳೆದ ನಂತರ ಆತ್ಮನು ಚೇತನಸ್ವರೂಪನೆಂಬ ನಂಬಿಕೆಯು ಬೆಳೆಯಿತು. ಆಗ ಮನಶ್ಶಾಸ್ತ್ರಜ್ಞರು ಹರಿಯುವ ಹೊಳೆಯ ಪ್ರವಾಹವನ್ನು ಹೋಲುವಂತಹ ಚೇತನತ್ವವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವುದನ್ನು ತಮ್ಮ ಗುರಿಯನ್ನಾಗಿಟ್ಟುಕೊಂಡರು. ಇಂತಹ ಸನ್ನಿವೇಶದಿಂದಲೂ ಮನಶ್ಶಾಸ್ತ್ರವು ವಿಜ್ಞಾನದ ಅಂತಸ್ತನ್ನು ಮುಟ್ಟಿದಂತಾಗಲಿಲ್ಲ. ಇಂತಹ ಭಾವನೆಯನ್ನು ವಿಲಿಯಂ ಜೇಮ್ಸ್ ಎಂಬಾತನು ಸ್ಪಷ್ಟಪಡಿಸಿದನು. ಇದು ಕೆಲವರಿಗೆ ಸರಿಬೀಳಲಿಲ್ಲ. ಇದರ ಪರಿಣಾಮವಾಗಿ ಮನೋವಿಜ್ಞಾನವನ್ನು ಮನಸ್ಸಿಗೆ ಸಂಬಂಧಿಸಿದ ಅಂಶಗಳನ್ನು ವಿಮರ್ಶಿಸುವ ವಿಷಯವೆಂದು ಭಾವಿಸುವುದು ರೂಢಿಗೆ ಬಂದಿತು. ಇದರ ಜೊತೆಗೆ, ಮಾನಸಿಕ ಕ್ರಿಯೆಗಳೂ ಮತ್ತು ದೈಹಿಕ ಕ್ರಿಯೆಗಳೂ ಪರಸ್ಪರ ಸಂಬಂಧಿಸಿವೆ ಎನ್ನುವ ನಂಬಿಕೆಯೂ ಜನರಲ್ಲಿ ಮೂಡಿತು. ಮಾನಸಿಕ ಮತ್ತು ದೈಹಿಕ ಕ್ರಿಯೆಗಳಿಗಿರುವ ಸಂಬಂಧವನ್ನು ಅಳೆಯುವುದಕ್ಕಾಗಿ ಪ್ರಯೋಗಗಳೂ ನಡೆದವು. ಇಂತಹ ಪ್ರಯೋಗಗಳಲ್ಲಿ ಮೊಟ್ಟಮೊದಲನೆಯದು ಫೆಕ್ನರ್ ಎಂಬುವವನಿಂದ ನಡೆಸಲ್ಪಟ್ಟಿತು. ಇದರ ವರದಿಯು ೧೮೬೦ರಲ್ಲಿ ಪ್ರಕಟವಾಯಿತು.

ದೇಹದ ಶಕ್ತಿಯು ಹೆಚ್ಚಿದಂತೆಲ್ಲಾ ಒಂದು ಅಂತಸ್ತನ್ನು ತಲಪುವ ವರೆಗೂ ಮನಸ್ಸಿನ ಶಕ್ತಿಯೂ ಹೆಚ್ಚುವುದೆಂದು ಫೆಕ್ನರ್ ತನ್ನ ಪ್ರಯೋಗದಿಂದ ತೋರಿಸಿದನು. ಫೆಕ್ನರ್‌ನಂತೆ ಹೆಲ್ಮ್‌ಹೋಲ್ಟ್ಸ್, ವಿಲ್‌ಹೆಲ್ಮ್ ವುಂಟ್ ಮೊದಲಾದವರು ಸಂಪ್ರಜ್ಞಾತ್ಮಕ ಅನುಭವಗಳ ವಿಚಾರವಾಗಿಯೂ ಮತ್ತು ದೈಹಿಕ - ಮಾನಸಿಕ ಕ್ರಿಯೆಗಳಿಗಿರುವ ಅನ್ಯೋನ್ಯ ಸಂಬಂಧಗಳ ವಿಚಾರವಾಗಿಯೂ ಪ್ರಯೋಗಗಳನ್ನು ನಡೆಸಿದರು. ಈ ಪ್ರಯೋಗಗಳನ್ನು ನಡೆಸುವ ಪರಿಸ್ಥಿತಿಯನ್ನು ಮುಟ್ಟುವ ಕಾಲದಲ್ಲಿ ಮನಶ್ಶಾಸ್ತ್ರವನ್ನು ಮಾನಸಿಕ ಕ್ರಿಯೆಗಳನ್ನು ವಿಮರ್ಶಿಸುವ ಕ್ಷೇತ್ರವೆಂದು ಪರಿಗಣಿಸುವುದು ಅಸಾಧ್ಯವೆಂದು ಕಂಡುಬಂದಿತು. ಏಕೆಂದರೆ ಮಾನಸಿಕ ಕ್ರಿಯೆಗಳು ಪ್ರಾಣಿಗಳಲ್ಲಿ ನಡೆಯುವುವೆಂಬ ಅಂಶವನ್ನೂ ಊಹೆಯಿಂದ ನಿಶ್ಚಯಿಸಬೇಕಾಗಿದ್ದಿತೇ ಹೊರತು ಇವುಗಳಿಗೆ ನೇರವಾದ ಆಧಾರಗಳು ದೊರೆಯುವಂತಿರಲಿಲ್ಲ. ಈ ಸನ್ನಿವೇಶದಲ್ಲಿ ಮನೋವಿಜ್ಞಾನದ ಕ್ಷೇತ್ರದ ವಿಚಾರವಾಗಿ ಪ್ರಯೋಗಗಳನ್ನು ನಡೆಸುವುದಕ್ಕೆ ಅನುಕೂಲವಾಗುವಂತೆ ಅಂಶಗಳನ್ನು ಸೂಚಿಸಬೇಕಾಯಿತು. ಇದರ ಪರಿಣಾಮವಾಗಿ ಪ್ರಯೋಗದ ಹಿಡಿತಕ್ಕೆ ಬರದ ಅಂಶಗಳನ್ನು ಬಿಡಬೇಕಾಯಿತು. ಸಾಮಾನ್ಯವಾಗಿ ಕಂಡುಬರುವ ಕಾರಣಗಳನ್ನೂ ಮತ್ತು ಅವುಗಳ ಪ್ರಭಾವದಿಂದ ಪ್ರಾಣಿಗಳ ವರ್ತನೆಯಲ್ಲಾಗುವ ಬದಲಾವಣೆಗಳನ್ನೂ ಗಣನೆಗೆ ತೆಗೆದುಕೊಂಡು ಮನಶ್ಶಾಸ್ತ್ರದ ಅಂಶಗಳನ್ನು ವಿಮರ್ಶಿಸುವುದು ರೂಢಿಗೆ ಬಂದಿತು. ಈ ಸಮಯದಲ್ಲಿಯೇ ಮನಶ್ಶಾಸ್ತ್ರವು ವಿಜ್ಞಾನದ ಅಂತಸ್ತನ್ನು ಮುಟ್ಟಿತು, ವಿಜ್ಞಾನಗಳಲ್ಲಿ ಒಂದೆನಿಸಿತು. ಇದರಿಂದ ಆತ್ಮ, ಚೇತನತ್ವ ಮತ್ತು ಮನಸ್ಸು ಪ್ರಾಣಿಗಳ ವರ್ತನೆಗೆ ಸಂಬಂಧಿಸಿಲ್ಲವೆಂಬ ಅಭಿಪ್ರಾಯವಲ್ಲ. ಈ ಅಂಶಗಳಿಗೂ ಮತ್ತು ಪ್ರಾಣಿಗಳ ವರ್ತನೆಗೂ ಸಂಬಂಧ

ಇರಬಹುದು. ಆದರೆ ಮನೋವಿಜ್ಞಾನಿಗಳಿಗೆ ಈ ವಿಧದ ಸಂಬಂಧವನ್ನು ಪ್ರಯೋಗಗಳ ನೆರವಿನಿಂದ ಸಾಧಿಸುವುದಕ್ಕಾಗದೇ ಇರುವುದರಿಂದ ಅದರ ವಿಚಾರವಾಗಿ ವಿಮರ್ಶಿಸುವುದು ಮನೋವಿಜ್ಞಾನದ ಕ್ಷೇತ್ರಕ್ಕೆ ಸೇರಿಲ್ಲವೆಂದು ನಿಶ್ಚಯಿಸಿದ್ದಾಗಿದೆ. ಉದ್ದೀಪನಗಳಿಂದಲೂ ಮತ್ತು ಪ್ರಕ್ರಿಯೆಗಳಿಂದಲೂ ಕೂಡಿದ ವರ್ತನೆಯನ್ನು ವಿವರಿಸಿದರೆ ಸಾಕಾಗುವುದೆಂದು ಮನೋವಿಜ್ಞಾನಿಗಳ ಅಭಿಪ್ರಾಯ. ಆದರೆ ಮನೋವಿಜ್ಞಾನವು ಕೇವಲ ವರ್ತನೆಗೆ ಸಂಬಂಧಿಸಿದಂತೆ ಉಳಿಯುವುದೂ ಅಸಾಧ್ಯವೆನಿಸಿದೆ. ಮನೋವಿಜ್ಞಾನವು ವರ್ತನೆಯನ್ನು ವಿವರಿಸಬೇಕಾದರೆ ಆತ್ಮ ಮತ್ತು ಮನಸ್ಸುಗಳಿಗೆ ಸಂಬಂಧಿಸಿದಂತೆ ವಿಮರ್ಶೆಯನ್ನು ನಡೆಸುವುದು ಅತ್ಯಾವಶ್ಯಕವೆಂದು ಕೆಲವರು ಈಗಲೂ ಸಲಹೆಗಳನ್ನು ಕೊಡುತ್ತಿದ್ದಾರೆ. ಆದರೆ ಇದು ಈಗ ಬಳಕೆಯಲ್ಲಿರುವ ಪ್ರಾಯೋಗಿಕ ಪದ್ಧತಿಗಳಿಗೆ ಅನುಕೂಲವಾದ ಅಭಿಪ್ರಾಯವಲ್ಲ.

ಪ್ರಾಣಿಗಳ ವರ್ತನೆಯನ್ನು ವಿವರಿಸುವುದಕ್ಕೆ ಹೊರಟಿರುವ ಮನೋವಿಜ್ಞಾನಿಗಳೂ ಭಿನ್ನಾಭಿಪ್ರಾಯಗಳಿಂದ ಕೂಡಿರುವುದು ಒಂದು ಆಶ್ಚರ್ಯಕರವಾದ ವಿಷಯವೇನೂ ಅಲ್ಲ. ಇಂತಹ ಪರಿಸ್ಥಿತಿಯನ್ನು ಇತರ ಕ್ಷೇತ್ರಗಳಲ್ಲಿಯೂ ನೋಡಬಹುದು. ಮನೋವಿಜ್ಞಾನಿಗಳಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಅವು ಕೇವಲ ವಿಧಾನಗಳಿಗೆ ಸಂಬಂಧಿಸಿದಂತೆ ಇವೆ. ಯಾವ ವಿಧಾನದಿಂದ ಪ್ರಾಣಿಗಳ ವರ್ತನೆಯನ್ನು ವಿಶ್ಲೇಷಿಸಿದರೆ ಅನುಕೂಲವಾಗಬಹುದು, ಮತ್ತು ಯಾವ ವಿಧದ ಸಿದ್ಧಾಂತವು ಪ್ರಾಣಿಗಳ ವರ್ತನೆಯನ್ನು ಚೆನ್ನಾಗಿ ವಿವರಿಸುತ್ತದೆ ಎನ್ನುವ ಸಮಸ್ಯೆಗಳು ಮನೋವಿಜ್ಞಾನದ ಕ್ಷೇತ್ರದಲ್ಲಿಯೂ ಕಂಡುಬರುತ್ತವೆ. ಸಾಮಾನ್ಯವಾಗಿ ಪ್ರಾಣಿಗಳ ಮನೋವೈಜ್ಞಾನಿಕ ಕ್ರಿಯೆಗಳನ್ನು ವಿವರಿಸುವ ಕಾಲದಲ್ಲಿ ಮನೋವಿಜ್ಞಾನಿಗಳಲ್ಲಿ ಕೆಲವರು ರಚನಾತ್ಮಕವಾದವೇ

ಮುಖ್ಯವಾದದ್ದೆಂದು ಹೇಳುತ್ತಾರೆ. ಇನ್ನು ಕೆಲವರು ಕಾರ್ಯಾತ್ಮಕವಾದದಿಂದ ಪ್ರಾಣಿಗಳ ವರ್ತನೆಯನ್ನು ಚೆನ್ನಾಗಿ ವಿವರಿಸಬಹುದೆಂದು ನಂಬುತ್ತಾರೆ. ಸಮಗ್ರಾಕೃತಿಯ ವಾದವು ವೈಶಿಷ್ಟ್ಯದಿಂದ ಕೂಡಿದ ಇನ್ನೊಂದು ಭಾವನೆಯಂತಿದೆ. ವರ್ತನೆಯನ್ನು ಆಧಾರವನ್ನಾಗಿಟ್ಟುಕೊಂಡು ಅದಕ್ಕೆ ಹೊಂದುವಂತೆ ಉದ್ದೀಪನಗಳನ್ನು ಹುಡುಕುವುದು ಸರಿಯಾದದ್ದಲ್ಲವೆಂದು ಭಾವಿಸಿ ಇದಕ್ಕೆ ವಿರೋಧವಾಗಿರುವಂತೆ ಸಮಗ್ರಾಕೃತಿಯ ದೃಷ್ಟಿಯನ್ನು ಕೆಲವರು ೧೯೧೨ರಲ್ಲಿ ಜರ್ಮನಿಯಲ್ಲಿ ವ್ಯಕ್ತಪಡಿಸಿದರು. ಅವರು ಮಸ್ತಿಷ್ಕವು ಸಂವೇದನೆಯ ಸಂಘಟನೆಯಲ್ಲಿ ಒಂದು ಮುಖ್ಯವಾದ ಪಾತ್ರವನ್ನು ವಹಿಸುವುದೆಂದು ಸೂಚಿಸಿದರು. ಪ್ರಾಣಿಗಳ ವರ್ತನೆಯು ಅನೇಕ ವಿಧದ 'ಶಕ್ತಿಗಳಿಂದ' ಕೂಡಿದ ಕ್ಷೇತ್ರದಲ್ಲಿ ನಡೆಯುವುದೆಂದು ಅವರ ಅಭಿಪ್ರಾಯ. ಮನೋವಿಶ್ಲೇಷಣೆಯೂ ವರ್ತನೆಯನ್ನು ವಿವರಿಸುವುದಕ್ಕೂ ಮತ್ತು ವರ್ತನೆಗೆ ಕಾರಣಗಳನ್ನು ಹುಡುಕುವುದಕ್ಕೂ ವೈಶಿಷ್ಟ್ಯದಿಂದ ಕೂಡಿದ ಒಂದು ಕ್ಷೇತ್ರವಾಗಿದೆ. ಇತ್ತೀಚೆಗೆ ಇಂತಹ ನಂಬಿಕೆಗಳಲ್ಲಿಯೂ ವ್ಯತ್ಯಾಸಗಳಾಗಿವೆ. ಸಂಶೋಧನೆಗಳು ಮುಂದುವರಿದಂತೆಲ್ಲಾ ಹೊಸ ಸಿದ್ಧಾಂತಗಳೂ ಬೆಳೆದಿವೆ.

ಈಗ ಮನೋವಿಜ್ಞಾನದ ಕ್ಷೇತ್ರದಲ್ಲಿ ಪ್ರಾಣಿಗಳ ವರ್ತನೆಯನ್ನು ಹೋಲಿಸಿ ನೋಡಬೇಕಾದ ಸಂದರ್ಭವು ಒದಗಿರುವುದರಿಂದ ಮನೋವಿಜ್ಞಾನಿಗಳು ಬಳಸುವ ಯಂತ್ರೋಪಕರಣಗಳಲ್ಲಿಯೂ ವ್ಯತ್ಯಾಸಗಳಾಗಿವೆ. ಮನಶ್ಶಾಸ್ತ್ರವು ದರ್ಶನ ಶಾಸ್ತ್ರದ ಒಂದು ಶಾಖೆಯೆಂಬ ಭಾವನೆಯು ಇದ್ದಾಗ ಪಂಡಿತರ ಮಾತುಗಳೇ ಮನಶ್ಶಾಸ್ತ್ರದ ಬೆಳವಣಿಗೆಗೆ ಆಧಾರಗಳಾಗಿದ್ದವು. ಸ್ವಲ್ಪ ಕಾಲವು ಕಳೆದನಂತರ ಅಂತರ್ ವೀಕ್ಷಣೆಯು (introspection) ಒಂದು ಸೂಕ್ತವಾದ ವಿಧಾನವೆಂದು ಒಪ್ಪಿಕೊಂಡಿದ್ದಾಯಿತು.

ಇದರ ಜೊತೆಯಲ್ಲಿಯೇ ವರ್ತನೆಯನ್ನು ಅರಿತುಕೊಳ್ಳುವ ಪ್ರಯತ್ನಕ್ಕೆ ನೆರವಾಗುವಂತೆ, ಪರೀಕ್ಷೆಗಳನ್ನು (tests) ನಡೆಸುವುದು ರೂಢಿಗೆ ಬಂದಿತು. ಪರೀಕ್ಷೆಗಳನ್ನು ನಡೆಸುವುದು ಮುಂದುವರಿದಂದೆಲ್ಲಾ ಯಂತ್ರೋಪಕರಣಗಳನ್ನು ಪ್ರಯೋಗಗಳಿಗೆ ನೆರವಾಗುವಂತೆ ತಯಾರಿಸುವುದೂ ಮತ್ತು ಅವುಗಳನ್ನು ಬಳಸುವುದೂ ಆರಂಭವಾದವು. ಇತ್ತೀಚೆಗೆ ಪ್ರಯೋಗಗಳ ಸಹಾಯದಿಂದ ಪ್ರಾಣಿಗಳ ವರ್ತನೆಯನ್ನು ವಿವರಿಸಬೇಕಾದ ಆವಶ್ಯಕತೆ ಇರುವುದರಿಂದ ಮನೋವಿಜ್ಞಾನದ ಕ್ಷೇತ್ರದಲ್ಲಿ ಯಂತ್ರೋಪಕರಣಗಳ ಬಳಕೆಯು ಹೆಚ್ಚಾಗಿ ಕಂಡುಬರುತ್ತದೆ.

ಮನೋವಿಜ್ಞಾನವು ದರ್ಶನಶಾಸ್ತ್ರದಿಂದ ಒಂದು ಪ್ರತ್ಯೇಕವಾದ ವಿಷಯದ ರೂಪದಲ್ಲಿ ಹೊರಗಡೆಗೆ ಬಂದ ಕಾಲದಲ್ಲಿ ಅದರಲ್ಲಿ ಹೆಚ್ಚು ಶಾಖೆಗಳಿರಲಿಲ್ಲ. ಆದರೆ ಕಾಲವು ಕಳೆದಂತೆಲ್ಲಾ ಸಿದ್ಧಾಂತಗಳೂ, ಭಿನ್ನಾಭಿಪ್ರಾಯಗಳೂ ಮತ್ತು ಸಂಶೋಧನೆಗಳೂ ಹೆಚ್ಚಿ, ಇದರ ಪರಿಣಾಮದಿಂದ ಈಗ ಅನೇಕ ಶಾಖೆಗಳು ಏರ್ಪಟ್ಟಿವೆ. ಈ ಶಾಖೆಗಳಿಗೆ ಸಂಬಂಧಿಸಿದಂತೆ ಮನೋವಿಜ್ಞಾನಿಗಳು ಅನೇಕ ವಿಧದ ಕೆಲಸಗಳನ್ನು ಮಾಡುತ್ತಿದ್ದಾರೆ. ಅವರ ಕೆಲಸದ ಕ್ಷೇತ್ರಗಳ ಸಂಖ್ಯೆಯೂ ದಿನೇದಿನೇ ಹೆಚ್ಚುತ್ತಿದೆ. ಸಾಮಾನ್ಯ ಮನೋವಿಜ್ಞಾನ, ಅಪಸಾಮಾನ್ಯ ಮನೋವಿಜ್ಞಾನ ಶಿಕ್ಷಣ ಮನೋವಿಜ್ಞಾನ, ಔದ್ಯೋಗಿಕ ಮನೋವಿಜ್ಞಾನ, ನೈದಾನಿಕ ಮನೋವಿಜ್ಞಾನ, ಆನ್ವಯಿಕ ಮನೋವಿಜ್ಞಾನ, ತೌಲನಿಕ ಮನೋವಿಜ್ಞಾನ, ಶಿಶುಮನೋವಿಜ್ಞಾನ, ಅಪರಾಧ ಮನೋವಿಜ್ಞಾನ, ಜನನ ಮನೋವಿಜ್ಞಾನ, ಬಾಲಾಪರಾಧಗಳು, ನ್ಯಾಯ ಮನೋವಿಜ್ಞಾನ, ಸೈನಿಕ ಮನೋವಿಜ್ಞಾನ, ಶರೀರಕ್ರಿಯಾ ಮನೋವಿಜ್ಞಾನ, ಮನೋವಿಶ್ಲೇಷಣೆ, ವಿಕಾಸ ಮನೋವಿಜ್ಞಾನ, ಸಾಂಘಿಕ ಮನೋವಿಜ್ಞಾನ, ವ್ಯಕ್ತಿತ್ವ-

ಮನೋವಿಜ್ಞಾನೇ ಕಲಿಕೆ, ವಿಭೇದಾತ್ಮಕ ಮನೋವಿಜ್ಞಾನ, ಇವೇ ಮೊದಲಾದ ಅನೇಕ ಶಾಖೆಗಳು ಈಗ ಬೆಳೆದುಬಂದಿವೆ. ಇವುಗಳ ಸಂಖ್ಯೆಯು ಈಗ ಸುಮಾರು ಇಪ್ಪತ್ತೆರಡಕ್ಕೆ ಏರಿದೆ. ಈಗ ಈ ಶಾಖೆಗಳಿಗಿರುವ ವ್ಯತ್ಯಾಸವನ್ನು ಸ್ಥೂಲವಾಗಿ ವಿಮರ್ಶಿಸೋಣ.

ಸಾಮಾನ್ಯ ಮನೋವಿಜ್ಞಾನದ (General Psychology) ಒಂದು ಪುಸ್ತಕವನ್ನು ಓದಿದರೆ ಅದರಲ್ಲಿ ಮನೋವಿಜ್ಞಾನವೆಂದರೇನು, ಮನೋವಿಜ್ಞಾನಕ್ಕೂ ಮತ್ತು ಇತರ ವಿಷಯಗಳಿಗೂ ಯಾವ ರೀತಿಯ ಸಂಬಂಧವಿದೆ, ಸಂವೇದನೆ ಎಂದರೇನು ? ಪ್ರಾಣಿಗಳಲ್ಲಿ ಸಂವೇದನೆಯು ಯಾವ ರೀತಿಯಲ್ಲಿ ನಡೆಯುತ್ತದೆ—ಸಂವೇದನೆಯ ಕ್ರಿಯೆಯಲ್ಲಿ ಮಸ್ತಿಷ್ಕವೂ ಮತ್ತು ನರಮಂಡಲವೂ ಯಾವ ರೀತಿಯಲ್ಲ ಭಾಗವಹಿಸುತ್ತವೆ? ವಸ್ತು ಜ್ಞಾನಾತ್ಮಕ ಅನುಭವಕ್ಕೂ ಮತ್ತು ಸಂವೇದನೆಗೂ ಇರುವ ವ್ಯತ್ಯಾಸಗಳು ಯಾವುವು ? ಅವಧಾನ ಮತ್ತು ಅದರ ಲಕ್ಷಣಗಳು, ಜ್ಞಾಪಕಶಕ್ತಿ, ಕಲಿಕೆ, ಆಲೋಚಿಸುವುದು, ತರ್ಕಿಸುವುದು, ಇತ್ಯಾದಿ ಅನೇಕ ಪರಿವರ್ತ್ಯಗಳು ಯಾವ ರೀತಿಯಲ್ಲಿ ಪ್ರಾಣಿಗಳ ವರ್ತನೆಯ ಮೇಲೆ ಪರಿಣಾಮಕಾರಿಗಳಾಗಿರುತ್ತವೆ— ಇವೇ ಮೊದಲಾದ ಪ್ರಶ್ನೆಗಳಿಗೆ ಸಾಮಾನ್ಯ ಮನೋವಿಜ್ಞಾನದ ಪುಸ್ತಕಗಳಲ್ಲಿ ಸಮಂಜಸವಾದ ವಿಮರ್ಶೆಗಳು ದೊರೆಯುತ್ತವೆ. ಸಾಮಾನ್ಯ ಮನೋವಿಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ವಾಚಕರಿಗೆ ವಿಷಯದ ಪರಿಚಯವನ್ನು ಮಾಡಿಕೊಡುವ ಉದ್ದೇಶದಿಂದ ಬರೆದಿರುವುದರಿಂದ ಅವುಗಳಲ್ಲಿ ಹೆಚ್ಚಾಗಿ ಆಧುನಿಕ ಸಂಶೋಧನೆಗಳಿಗೆ ಸಂಬಂಧಿಸಿದ ಅಂಶಗಳಿರುವುದಿಲ್ಲ. ಹಾಗೇನಾದರೂ ಇತ್ತೀಚೆಗೆ ನಡೆಸಿದ ಸಂಶೋಧನೆಗಳ ವಿಚಾರವಾಗಿ ಸೂಚನೆಗಳು ಕಂಡುಬಂದರೂ ಅವು ಸ್ಥೂಲವಾಗಿ ವಿಮರ್ಶಿಸ

ಲ್ಪಟ್ಟಿರುತ್ತವೆ. ಸಾಮಾನ್ಯ ಮನೋವಿಜ್ಞಾನದ ಕ್ಷೇತ್ರವನ್ನು ವಿವರಿಸುವ ಸಂದರ್ಭದಲ್ಲಿ ಗ್ರಂಥಕರ್ತರು ಸಾಮಾನ್ಯ ಮನೋವಿಜ್ಞಾನಕ್ಕೂ ಮತ್ತು ಮನೋವಿಜ್ಞಾನದ ಇತರ ಶಾಖೆಗಳಿಗೂ ಇರುವ ವ್ಯತ್ಯಾಸವನ್ನೂ ವಿವರಿಸುತ್ತಾರೆ.

ಅಪಸಾಮಾನ್ಯ ಮನೋವಿಜ್ಞಾನವು (Abnormal Psychology) ಮನೋವಿಜ್ಞಾನದ ಇನ್ನೊಂದು ಶಾಖೆ. ಅಪಸಾಮಾನ್ಯ ಮನೋವಿಜ್ಞಾನದ ಕ್ಷೇತ್ರದಲ್ಲಿ ಮಾನಸಿಕ ರೋಗಗಳ ವಿಚಾರವಾಗಿ ವಿಮರ್ಶೆ ನಡೆಯುತ್ತದೆ. ಅಪಸಾಮಾನ್ಯ ಮನೋವಿಜ್ಞಾನದ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಮಾನಸಿಕ ರೋಗಗಳು ಯಾವ ರೀತಿಯಲ್ಲಿ ಹುಟ್ಟುತ್ತವೆ, ಅವುಗಳ ಬೆಳವಣಿಗೆಗೆ ಕಾರಣಗಳು ಯಾವುವು, ಅವುಗಳ ವಿಧಗಳು ಮತ್ತು ಲಕ್ಷಣಗಳು, ಅವುಗಳನ್ನು ಮುಂಚಿತವಾಗಿಯೇ ತಡೆಗಟ್ಟುವುದಕ್ಕಾಗುತ್ತದೆಯೇ ಎನ್ನುವ ಅಂಶ, ಮನೋರೋಗಗಳ ನಿವಾರಣೋಪಾಯಗಳು, ಮನೋರೋಗಗಳಿಗೂ ಮತ್ತು ಆನುವಂಶೀಯತೆಗೂ ಇರುವ ಸಂಬಂಧ—ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಅಂಶಗಳು ದೊರೆಯುತ್ತವೆ. ಅಪಸಾಮಾನ್ಯ ಮನೋವಿಜ್ಞಾನವನ್ನು ಓದುವುದು ಕೇವಲ ಮನೋವಿಜ್ಞಾನಿಗಳಿಗೇ ಸೀಮಿತವಾಗಿದೆಯೆಂದು ಭಾವಿಸುವುದು ಸರಿಯಾದದ್ದಲ್ಲ. ಸಾಮಾನ್ಯಜನರೂ ಇದನ್ನು ಓದುವುದರಿಂದ ತಮ್ಮ ವರ್ತನೆಯಲ್ಲಿರುವ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುವುದಕ್ಕೆ ಸಹಾಯವಾಗುತ್ತದೆ. ಇದರ ಜೊತೆಗೆ ಅಪಸಾಮಾನ್ಯ ವರ್ತನೆಯ ವಿಚಾರವಾಗಿ, ಜ್ಞಾನಾರ್ಜನೆಯನ್ನು ಮಾಡುವುದರಿಂದ ಅನ್ಯ ವ್ಯಕ್ತಿಗಳಲ್ಲಿ ಕಂಡುಬರುವ ದೋಷಗಳನ್ನು ತಿದ್ದಿ ಸರಿಪಡಿಸಬಹುದು.

ನೈದಾನಿಕ ಮನೋವಿಜ್ಞಾನವು (Clinical Psychology)

ಅಪಸಾಮಾನ್ಯ ಮನೋವಿಜ್ಞಾನದಂತೆಯೇ ಇದ್ದರೂ ಈ ಕ್ಷೇತ್ರದಲ್ಲಿ ಮನೋರೋಗಗಳ ಚಿಕಿತ್ಸೆಗೆ ಅನುಕೂಲವಾಗುವಂತೆ ಅನೇಕ ಅಂಶಗಳ ನಿರೂಪಣೆ ಇರುತ್ತದೆ. ಇಂತಹ ವಿವರಣೆಯು ನೈದಾನಿಕ ಮನೋವಿಜ್ಞಾನಿಗಳ ವೃತ್ತಿಯನ್ನು ಕೈಗೊಳ್ಳುವ ವ್ಯಕ್ತಿಗಳಿಗೆ ಬಹಳ ಉಪಯೋಗಕ್ಕೆ ಬರುತ್ತದೆ. ಈ ಕ್ಷೇತ್ರದ ವೈಶಿಷ್ಟ್ಯವೆಂದರೆ ಅನೇಕ ವಿಧದ ಮನೋರೋಗಗಳಿಂದ ನರಳಿದ ವ್ಯಕ್ತಿಗಳ ಜೀವನಚರಿತ್ರೆಯು ಇದರಲ್ಲಿರುತ್ತದೆ. ಇದರಲ್ಲಿ ಚಿತ್ರಿಸಿರುವ ವಿಧಾನಗಳೂ ಮನೋರೋಗಗಳ ಚಿಕಿತ್ಸೆಗೆ ಸಹಾಯಕಾರಿಗಳಾಗಿರುತ್ತವೆ. ಮನೋರೋಗಗಳಿಂದ ನರಳುವ ವ್ಯಕ್ತಿಗಳ ಜೀವನಚರಿತ್ರೆಯನ್ನು ಕೊಡುವ ಸಂದರ್ಭದಲ್ಲಿಯೂ ಅವರ ಮನೋರೋಗಗಳಿಗೆ ಸಂಬಂಧಿಸಿದಂತೆ ಹೆಚ್ಚು ಅಂಶಗಳನ್ನು ಕೊಟ್ಟಿರುವುದನ್ನು ಈ ಕ್ಷೇತ್ರದಲ್ಲಿ ಬರೆದ ಗ್ರಂಥಗಳಲ್ಲಿ ನೋಡಬಹುದು. ನೈದಾನಿಕ ಮನೋವಿಜ್ಞಾನಿಗಳು ಮಾಡುವ ಕೆಲಸವು ಯಾವುದು ಎಂಬ ಪ್ರಶ್ನೆಯನ್ನು ಸಾಮಾನ್ಯವಾಗಿ ಎಲ್ಲರೂ ಕೇಳುತ್ತಾರೆ. ಮನೋರೋಗಗಳಿಂದ ನರಳುವವರು ಮನೋವಿಜ್ಞಾನಿಗಳೊಡನೆ ಸ್ವಲ್ಪಮಟ್ಟಿಗಾದರೂ ಸಹಕರಿಸುವ ಪರಿಸ್ಥಿತಿಯಲ್ಲಿರುವರೆಂಬ ನಂಬಿಕೆಯು ಬಂದಾಗ ನೈದಾನಿಕ ಮನೋವಿಜ್ಞಾನಿಯು ರೋಗಿಯ ಪರೀಕ್ಷೆಯನ್ನು ನಡೆಸುತ್ತಾನೆ. ರೋಗಿಯ ಬುದ್ಧಿಶಕ್ತಿಯನ್ನು ಅಳೆಯುವುದು, ವ್ಯಕ್ತಿತ್ವದ ಪರೀಕ್ಷೆಗಳನ್ನು ನಡೆಸಿ ಅವನ ಸಂವೇಗ, ಕುಟುಂಬ ವರ್ಗದವರೊಡನೆ ಮತ್ತು ಇತರರೊಡನೆ ಅವನ ವ್ಯವಹಾರ, ಅವನ ಸಾಂಘಿಕ ಅಂತಸ್ತು, ರೋಗವು ಯಾವ ವಿಧವಾದದ್ದು ಎನ್ನುವ ವಿಷಯ, ಅದರ ಚಿಹ್ನೆಗಳು ಮತ್ತು ಅದಕ್ಕೆ ಕಾರಣಗಳು ಇವೇ ಮೊದಲಾದ ಅಂಶಗಳಿಗೆ ಸಂಬಂಧಿಸಿದಂತೆ ವಿಷಯಸಂಗ್ರಹವನ್ನು ಮಾಡಿ, ರೋಗಿಯನ್ನು ಮನೋರೋಗ ಚಿಕಿತ್ಸೆಯನ್ನು ನಡೆಸುವ

ವೈದ್ಯರ ಹತ್ತಿರಕ್ಕೆ ಕಳುಹಿಸುವುದು ಸಾಮಾನ್ಯವಾಗಿ ನೈದಾನಿಕ ಮನೋವಿಜ್ಞಾನಿಗಳು ಆಸ್ಪತ್ರೆಗಳಲ್ಲಿ ಮಾಡುತ್ತಿರುವ ಕೆಲಸ. ಆದರೆ ಇವರ ಕೆಲಸವು ಇಷ್ಟೇ ಅಲ್ಲ. ಇವರು ಇನ್ನೂ ಮುಂದು ವರಿದು ಮನೋವೈಜ್ಞಾನಿಕ ವಿಧಾನಗಳಿಂದಲೇ ಮನೋರೋಗ ವನ್ನೂ ನಿವಾರಿಸುವುದಾದರೆ ಇವರ ಪಾತ್ರವು ಉತ್ತಮವೆನಿಸಿ ಕೊಳ್ಳುತ್ತದೆ. ಈ ಕಾರಣದಿಂದ ಮನೋವಿಜ್ಞಾನಿಗಳಿಗೆ ಮನೋ ರೋಗಗಳ ಚಿಕಿತ್ಸೆಯಲ್ಲಿಯೂ ತರಬೇತಿ ದೊರೆತಿದ್ದರೆ ಇದರಿಂದ ಹೆಚ್ಚು ಪ್ರಯೋಜನವಾಗುತ್ತದೆ. ಮನೋರೋಗಿಗಳನ್ನು ಪರೀಕ್ಷಿ ಸುವಾಗ ಮನೋವಿಜ್ಞಾನಿಗಳು ಬಳಸುವ ಪರೀಕ್ಷೋಪಕರಣ ಗಳೆಂದರೆ ಸ್ಟ್ಯಾನ್‌ಫೋರ್ಡ್-ಬಿನೆ ಬುದ್ಧಿಶಕ್ತಿಯ ಪರೀಕ್ಷೆ, ಭಾಟಿಯಾ ಬುದ್ಧಿಮಾಪಕ ಪರೀಕ್ಷೆ, ರ್‍ಯಾವೆನ್ನನ ಪ್ರಗತಿಶೀಲ ಪರೀಕ್ಷೆ, ಮಿನ್ನೆಸೋಟದ ವ್ಯಕ್ತಿತ್ವದ ಪ್ರಶ್ನಾವಳಿ, ಬರ್ನ್ಟರಾಯ ಟರನ್ನ ವ್ಯಕ್ತಿತ್ವ ಪ್ರಶ್ನಾವಳಿ, ಬೆಲ್‌ನ ಸಮಾಯೋಜನ ಪ್ರಶ್ನಾವಳಿ, ಚಿತ್ತಪ್ರಕೃತಿಯ ಪರೀಕ್ಷೆ, ದ್ವಿಹಸ್ತ ಸಮನ್ವಯ ಪರೀಕ್ಷೆ, ರೋರ್ಶ್ಶಾಕಿನ ಮಸಿಗುರುತಿನ ಪರೀಕ್ಷೆ, ವಿಷಯ-ಸಂಕಲ್ಪ ಪರೀಕ್ಷೆ, ಚಿತ್ರಪೂರಣ ಪರೀಕ್ಷೆಗಳಾಗಿರುತ್ತವೆ. ಇವುಗಳ ಜೊತೆಗೆ ಆವಶ್ಯಕವಾದದ್ದೆಂದು ಕಂಡುಬರುವ ಯಾವ ಪರೀಕ್ಷೆಯನ್ನಾದರೂ ಉಪಯೋಗಿಸಿಕೊಳ್ಳಬಹುದು. ನೈದಾನಿಕ ಮನೋವಿಜ್ಞಾನಿಗಳು ಮನೋರೋಗಿಗಳ ವ್ಯಕ್ತಿತ್ವದಲ್ಲಿರುವ ವಿಕೃತತತ್ವವನ್ನು ಅರಿತು ಕೊಳ್ಳಬೇಕಾದರೆ ಹೆಚ್ಚಾಗಿ ಸಂದರ್ಶನದ ವಿಧಾನವನ್ನು ಬಳಸು ತ್ತಾರೆ.

ವ್ಯಕ್ತಿತ್ವದ ಅಧ್ಯಯನವೂ (Personality) ಮನೋ ವಿಜ್ಞಾನದ ಒಂದು ಶಾಖೆ. ಈ ಶಾಖೆಯಲ್ಲಿ ವಿಶೇಷವಾಗಿ ಮನುಷ್ಯನಾದವನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅಂಶಗಳ ವಿಚಾರ ವಾಗಿ ವಿಮರ್ಶೆಯು ನಡೆದಿರುವುದು ಕಂಡುಬರುತ್ತದೆ. ಪ್ರತಿ

ಯೊಬ್ಬನ ಅಭಿವೃತ್ತಿಗಳು, ನಂಬಿಕೆಗಳು, ಪೂರ್ವಾಗ್ರಹಗಳು, ದೈಹಿಕ ಮತ್ತು ಮಾನಸಿಕ ದಕ್ಷತೆ, ಸಂಸ್ಕೃತಿ ಮೊದಲಾದ ಅಂಶಗಳನ್ನು ತೆಗೆದುಕೊಂಡು ಅವುಗಳಿಂದ ಮನುಷ್ಯನ ವ್ಯಕ್ತಿತ್ವದ ರಚನೆಯಲ್ಲಾಗುವ ಬದಲಾವಣೆಗಳನ್ನು ವಿವರಿಸುವುದನ್ನು ಈ ಶಾಖೆಯಲ್ಲಿ ನೋಡಬಹುದು. ಉದಾಹರಣೆಗೆ, ಕ್ಲಕ್‌ಹಾನ್ ಎಂಬ ಮನೋವಿಜ್ಞಾನಿಯು ತನ್ನ ಗ್ರಂಥದಲ್ಲಿ ವಿವಿಧ ಸಂಸ್ಕೃತಿಗಳಿಂದ ಕೂಡಿದ ಪ್ರದೇಶಗಳಲ್ಲಿ ವಾಸಿಸುವ ಜನರ ವ್ಯವಹಾರಗಳಲ್ಲಿರುವ ಭಿನ್ನತೆಯನ್ನು ವಿವರಿಸಿದ್ದಾನೆ. ಇಂತಹ ವಿಶ್ಲೇಷಣೆಯನ್ನು ರೂತ್ ಬೆನೆಡಿಕ್ಟ್ ಬರೆದಿರುವ *Patterns of Culture* ಎಂಬ ಪುಸ್ತಕದಲ್ಲಿಯೂ ನೋಡಬಹುದು. ವ್ಯಕ್ತಿತ್ವವನ್ನು ಅಳೆಯುವ ಪ್ರಯತ್ನದಲ್ಲಿ ಮಾನವನ ವಿಶೇಷ ಗುಣಗಳನ್ನು ನಿರ್ಧರಿಸುವುದೂ ಮತ್ತು ಅಂತಹ ವಿಶೇಷ ಗುಣಗಳಿಗೆ ಸಂಬಂಧಿಸಿದಂತೆ ವರ್ತನೆಯನ್ನೂ ವಿವರಿಸುವುದೂ ಈ ಶಾಖೆಗೆ ಸೇರಿದ ಕೆಲಸಗಳು. ಮನೋವಿಜ್ಞಾನಿಗಳಲ್ಲಿ ಕೆಲವರು ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅಂಶಗಳಿಗೂ, ಇನ್ನು ಕೆಲವರು ಸಾಂಘಿಕ ಅಂಶಗಳಿಗೂ ಪ್ರಾಶಸ್ತ್ಯವನ್ನು ಕೊಟ್ಟು, ಅವುಗಳಿಂದ ವರ್ತನೆಯಲ್ಲಿ ಬದಲಾವಣೆಯಾಗುವುದೆಂದು ನಂಬುತ್ತಾರೆ. ಇಂತಹ ಸಲಹೆಗಳಿಗೆ ಅನುಕೂಲವಾಗುವಂತೆ ಸಂಶೋಧನೆಗಳೂ ನಡೆದಿವೆ. ಈ ಎರಡು ವಿಧದ ಅಂಶಗಳೂ ವ್ಯಕ್ತಿತ್ವದ ರಚನೆಯಲ್ಲಿ ಒಂದೇ ಸಮನಾದ ಪಾತ್ರವನ್ನು ವಹಿಸುವುವೆಂಬ ಸಲಹೆಯನ್ನು ಗಾರ್ಡನರ್ ಮರ್ಫಿ ಎಂಬ ಮನೋವಿಜ್ಞಾನಿಯು ವ್ಯಕ್ತಿತ್ವದ ವಿಷಯವನ್ನು ಕುರಿತು ಬರೆದಿರುವ ಗ್ರಂಥದಲ್ಲಿ ನೋಡಬಹುದು. ವ್ಯಕ್ತಿತ್ವದ ಮನೋವಿಜ್ಞಾನಿಗಳಲ್ಲಿ ಕೆಲವರು ದೇಹದ ಆಕಾರಕ್ಕೂ ಮತ್ತು ವ್ಯಕ್ತಿತ್ವದ ರಚನೆಗೂ ಇರುವ ಸಂಬಂಧವನ್ನು ಕಂಡುಹಿಡಿಯುವ ಪ್ರಯತ್ನವನ್ನು ಮಾಡಿದ್ದಾರೆ. ದೇಹದ ಆಕಾರದ ಮೇಲೆ ಮನುಷ್ಯರನ್ನು

ದುರ್ಬಲರೆಂದೂ, ಕ್ರೀಡಾಪಟುದೇಹದಿಂದ ಕೂಡಿದವರೆಂದೂ ಮತ್ತು ಗೋಲಕಾಯರೆಂದೂ ವಿಭಾಗಿಸಿ, ಈ ವಿಭಾಗಕ್ಕೆ ಸೇರಿದ ವ್ಯಕ್ತಿಗಳ ಚಿತ್ತಪ್ರಕೃತಿಯಲ್ಲಿರುವ ವ್ಯತ್ಯಾಸಗಳನ್ನು ಮನೋವಿಜ್ಞಾನಿಗಳು ನಿರ್ಧರಿಸಿದ್ದಾರೆ. ಆದರೆ ಇಂತಹ ವರ್ಗೀಕರಣದ ಕೆಲಸವು ಸುಲಭವಾದದ್ದಲ್ಲವೆಂಬ ಅಂಶವು ತಿಳಿದು ಬಂದಿದೆ. ವ್ಯಕ್ತಿತ್ವದ ರಚನೆಯ ವಿಚಾರವಾಗಿ ಮನೋವಿಜ್ಞಾನಿಗಳಲ್ಲಿ ಭಿನ್ನಾಭಿಪ್ರಾಯಗಳಿರುವುದು ಸಹಜವಾದ ವಿಷಯ. ಮನೋವಿಶ್ಲೇಷಣೆಯ ಸಿದ್ಧಾಂತಿಗಳು ವ್ಯಕ್ತಿತ್ವದ ರಚನೆಯನ್ನು ಚೇತನ, ಅಚೇತನ, ಇದ್, ಅಹಂ ಮತ್ತು ಅತಿಅಹಂಗಳ ಮಧ್ಯೆ ನಡೆಯುವ ಅನ್ಯೋನ್ಯಕ್ರಿಯೆಗಳ ಪರಿಣಾಮವೆಂದು ಸಾಧಿಸುತ್ತಾರೆ. ಮರ್‍ರೇ ಎಂಬ ಇನ್ನೊಬ್ಬ ವ್ಯಕ್ತಿತ್ವದ ಸಿದ್ಧಾಂತಿಯು ಏಳು ತತ್ವಗಳಿಂದ ಕೂಡಿದ ತನ್ನ ಸಿದ್ಧಾಂತವನ್ನು ಸೂಚಿಸಿದ್ದಾನೆ. ಮಸ್ತಿಷ್ಕವು ವರ್ತನೆಯನ್ನು ಒಂದುಗೂಡಿಸುವುದರಲ್ಲಿ ಮುಖ್ಯವಾದದ್ದು : ಮನುಷ್ಯನಾದವನು ತನ್ನ ಆಂತರಿಕ ಅಗತ್ಯಗಳನ್ನೂ ಮತ್ತು ಆವರಣದಿಂದ ಪ್ರೇರೇಪಿಸಲ್ಪಟ್ಟಂತೆ ನಡೆದುಕೊಳ್ಳಬೇಕಾದುದನ್ನೂ ಸರಿಪಡಿಸಿಕೊಂಡು ಹೋಗಬೇಕಾದರೆ ಸತತವಾಗಿ ಪ್ರಯತ್ನವನ್ನು ಮಾಡಬೇಕಾಗುತ್ತದೆ; ವ್ಯಕ್ತಿಯ ಜೀವನ ಚರಿತ್ರೆಯೇ ಅವನ ವ್ಯಕ್ತಿತ್ವದ ಅಧ್ಯಯನ; ಮನುಷ್ಯನಾದವನು ಮುಖ್ಯವಾಗಿ ಜೀವ-ರಸಾಯನಿಕ ಕ್ರಿಯೆಗಳಿಂದ ಕೂಡಿದವನಾಗಿರುತ್ತಾನೆ; ಮನುಷ್ಯನಾದವನ ಎಲ್ಲಾ ಕೆಲಸಗಳೂ ಅವನಲ್ಲಿ ಬಾಹ್ಯದಿಂದ ಕಂಡುಬರುವ ಅಂಶಗಳಿಂದಲೇ ಪ್ರಚೋದನೆಯನ್ನು ಪಡೆಯುವುದಿಲ್ಲ, ಅಚೇತನದ ಅಂತಸ್ತಿನಿಂದಲೂ ವರ್ತನೆಗೆ ಪ್ರೇರಣೆಯು ದೊರೆಯುತ್ತದೆ; ಎಲ್ಲರೂ ಒಂದೇ ಸಮನಾಗಿರುವುದಿಲ್ಲ, ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವ್ಯಕ್ತಿತ್ವದ ರಚನೆಯಲ್ಲಿ ಒಂದು ವಿಧದ ವೈಶಿಷ್ಟ್ಯದಿಂದ ಕೂಡಿರುತ್ತಾನೆ: ಮನುಷ್ಯ

ರಾದವರು ನಾಟಕಗಳಲ್ಲಿ ಭಾಗವಹಿಸುವ ಕಲಾವಿದರಂತೆ ತಮ್ಮ ಜೀವನದಲ್ಲಿ ಅನೇಕ ಪಾತ್ರಗಳನ್ನು ವಹಿಸುತ್ತಾರೆ—ಎಂಬ ಈ ಏಳು ತತ್ವಗಳು ಮರ್‍ರೆ ಎಂಬ ಮನೋವಿಜ್ಞಾನಿಯ ಸಿದ್ಧಾಂತಕ್ಕೆ ಆಧಾರಗಳಾಗಿವೆ.

ಯುಂಗ್ ಎಂಬ ಮತ್ತೊಬ್ಬ ವ್ಯಕ್ತಿತ್ವದ ಸಿದ್ಧಾಂತಿಯು ಮನುಷ್ಯನ ಜೀವನದಲ್ಲಿ ಬರುವ ದ್ವಂದ್ವಗಳ ಪರಿಸ್ಥಿತಿಯಲ್ಲಿ ಸ್ಥಿತಪ್ರಜ್ಞನಾಗಿರುವುದು ಆದರ್ಶ ವ್ಯಕ್ತಿತ್ವವೆನಿಸಿಕೊಳ್ಳುವುದೆಂದು ಸಾಧಿಸಿದ್ದಾನೆ. ಒಂದು ವಿಧದ ಗುಣದ ಪ್ರಭಾವವನ್ನು ಇದಕ್ಕೆ ವ್ಯತಿರಿಕ್ತವಾದ ಗುಣದ ಪ್ರಭಾವದಿಂದ ತಡೆಗಟ್ಟಬಹುದೆಂದು ಅವನ ವಾದ. ಉದಾಹರಣೆಗೆ, ಅತಿಯಾಗಿ ಸಮಾಜಕ್ಕೆ ಸೇವೆಯನ್ನು ಸಲ್ಲಿಸುವ ಸ್ವಭಾವವನ್ನು ವ್ಯಕ್ತಿಯು ತನ್ನ ಪ್ರಗತಿಗಾಗಿ ದುಡಿಯುವುದರಿಂದ ತಡೆಗಟ್ಟಬಹುದೆಂದು ಯುಂಗನ ಸಲಹೆ. ಯುಂಗನ ಸಿದ್ಧಾಂತದಲ್ಲಿ ಒಂದು ಮುಖ್ಯವಾದ ವಿಷಯವನ್ನು ತೆಗೆದುಕೊಂಡು ಅದಕ್ಕೆ ಸಂಬಂಧಿಸಿದಂತೆ ಇತರ ಅಂಶಗಳನ್ನು ವಿಮರ್ಶಿಸಿರುವುದನ್ನು ನೋಡಬಹುದು. ಸ್ಥಿತಪ್ರಜ್ಞತೆಯು ಈ ಸಂದರ್ಭದಲ್ಲಿ ಮುಖ್ಯವಾದ ಅಂಶ. ಇದು ವ್ಯಕ್ತಿತ್ವವು ಪರಿಪಕ್ವವಾದ ಸ್ಥಿತಿಯನ್ನು ಮುಟ್ಟಿರುವುದಕ್ಕೆ ಸೂಚನೆಯಂತಿದೆ. ಉಳಿದ ಅಂಶಗಳ ವಿಮರ್ಶೆಯು ಈ ಸ್ಥಿತಪ್ರಜ್ಞತ್ವದ ಪರಿಸ್ಥಿತಿಯನ್ನು ಹೊಂದುವುದಕ್ಕೆ ಸಹಾಯವಾಗುವಂತೆ ನಡೆದಿದೆ. ಯುಂಗನ ಸಿದ್ಧಾಂತದಲ್ಲಿ ನಿರೂಪಿಸಲ್ಪಟ್ಟಂತೆಯೇ ಅಡ್ಲರ್ ಎಂಬ ಇನ್ನೊಬ್ಬ ಸಿದ್ಧಾಂತಿಯ ವಾದದಲ್ಲಿಯೂ ಒಂದು ಅಂಶಕ್ಕೆ ಮಾತ್ರ ಪ್ರಮುಖ ಸ್ಥಾನವು ದೊರೆತಿದೆ. ಅದೇನೆಂದರೆ, ಪ್ರತಿಯೊಬ್ಬ ವ್ಯಕ್ತಿಯೂ ತಾನು ಇತರರಿಗಿಂತ ಕೀಳುಮಟ್ಟದಲ್ಲಿ ಇರುವೆನೆಂಬ ಭಾವನೆಯಿಂದ ಕೂಡಿರುತ್ತಾನೆ, ತನ್ನ ಕೀಳು ಮಟ್ಟದಿಂದ ಮೇಲ್ಮಟ್ಟಕ್ಕೆ ಏರಬೇಕೆಂಬುದೇ ಅವನ ಅಭಿಲಾಷೆ,

ಈ ಅಭಿಲಾಷೆಯ ಪೂರೈಕೆಗಾಗಿ ವ್ಯಕ್ತಿಯು ದುಡಿಯುತ್ತಾನೆ-ಇದು ಅಡ್ಲರನ ಸಿದ್ಧಾಂತದಲ್ಲಿ ಅಡಕವಾಗಿರುವ ಮುಖ್ಯಾಂಶ. ಸಲ್ಲೈವನ್ ಎಂಬ ಒಬ್ಬ ಸಿದ್ಧಾಂತಿಯು ಅಡ್ಲರಿನಿಗಿಂತ ಚೆನ್ನಾಗಿ ವ್ಯಕ್ತಿತ್ವದ ರಚನೆಯನ್ನೂ ಮತ್ತು ಅದರ ಬೆಳವಣಿಗೆಯನ್ನೂ ವಿವರಿಸುವುದಕ್ಕೆ ಪ್ರಯತ್ನಿಸಿದ್ದಾನೆ. ಸಲ್ಲೈವನ್ನನ ಸಿದ್ಧಾಂತಕ್ಕೆ ಆಧಾರವೆನಿಸಿದ ಆರು ತತ್ವಗಳಿವೆ. ಜನರ ಮಧ್ಯೆ ನಡೆಯುವ ಪರಸ್ಪರ ಸಂಪರ್ಕ, ಬಿಕ್ಕಟ್ಟಿನ ವ್ಯವಸ್ಥೆ, ಕುತೂಹಲ, ಒಬ್ಬ ವ್ಯಕ್ತಿ ಇನ್ನೊಬ್ಬನ ವಿಚಾರವಾಗಿ ಶಾಶ್ವತವಾಗಿ ಇಟ್ಟುಕೊಂಡಿರುವ ಅಭಿವ್ಯಕ್ತಿ, ವ್ಯಕ್ತಿಯು ತನ್ನ ಮತ್ತು ಇತರರ ವಿಚಾರವಾಗಿ ಇಟ್ಟುಕೊಂಡಿರುವ ಅಭಿಪ್ರಾಯ, ವ್ಯಕ್ತಿಗಾಗಿರುವ ಪ್ರತ್ಯಕ್ಷಾನುಭವಗಳು ಈ ಆರು ತತ್ವಗಳಾಗಿವೆ. ಪ್ರತಿಯೊಬ್ಬನ ವ್ಯಕ್ತಿತ್ವದ ಬೆಳವಣಿಗೆಯು ಏಳು ಅಂತಸ್ತುಗಳಲ್ಲಾಗುವುದೆಂದೂ, ಪ್ರಾಯದ ವಯಸ್ಸಿಗೆ ಬರುವುದಕ್ಕೆ ಮುಂಚಿತವಾಗಿ ನಡೆಯುವ ಬೆಳವಣಿಗೆಯು ವ್ಯಕ್ತಿತ್ವದ ಮೇಲೆ ಹೆಚ್ಚು ಪರಿಣಾಮಕಾರಿಯಾಗುವುದೆಂದೂ ಸಲ್ಲೈವನ್ ಹೇಳಿದ್ದಾನೆ. ಸಲ್ಲೈವನ್ನನ ಸಿದ್ಧಾಂತವನ್ನು ವಿಶ್ಲೇಷಿಸುವುದಕ್ಕೆ ಹೊರಟರೆ ಹೆಚ್ಚಾಗಿ ಸಂಶೋಧನೆಗಳನ್ನು ನಡೆಸುವುದಕ್ಕೆ ಅವಕಾಶವಿದೆ. ಸಲ್ಲೈವನ್ನನ ಸಿದ್ಧಾಂತದಿಂದ ಶಿಶುಮನೋವಿಜ್ಞಾನಿಗಳಿಗೆ ಹೆಚ್ಚು ಪ್ರಯೋಜನವಾಗಿದೆ ಎಂದು ಹೇಳಬಹುದು. ಕರೇನ್‌ಹಾರ್ನಿ ಎಂಬಾಕೆಯು ಆರು ತತ್ವಗಳ ಆಧಾರದ ಮೇಲೆ ತನ್ನ ಸಿದ್ಧಾಂತವನ್ನು ಬೆಳೆಸಿದ್ದರೂ ಪ್ರಾಯ್ಡ್ ಹೆಂಗಸರ ಪಾತ್ರಕ್ಕೆ ಕೊಟ್ಟಿರುವ ಪ್ರಮುಖ ಸ್ಥಾನವು ಸರಿಯಾದದ್ದಲ್ಲವೆಂದು ಸಮರ್ಥಿಸಿದ್ದಾಳೆ. ಈಕೆಯ ದೃಷ್ಟಿಯಲ್ಲಿ ಜನರ ಸಂಸ್ಕೃತಿಯಿಂದಲೇ ಅವರ ವ್ಯಕ್ತಿತ್ವದ ರಚನೆಯೂ ಬದಲಾಯಿಸುತ್ತದೆ. ತನಗಾಗಿ ಕಾಯಬೇಕೆಂದು ಕೇಳಿಕೊಳ್ಳುವವರು; 'ಮುಂದಕ್ಕೆ ಸಾಗುತ್ತಿರಿ' ಎಂದು ಪ್ರೇರಣೆಯನ್ನು ಕೊಡುವವರು: "ನನ್ನನ್ನು ಒಂಟಿಯಾಗಿರು

ಪ್ರದಕ್ಕೆ ಬಿಡಿ, ನಾನು ಯೋಚಿಸುತ್ತಿದ್ದೇನೆ" ಎಂದು ಹೇಳುವವರು ಈ ವಿಧದ ವ್ಯಕ್ತಿತ್ವವನ್ನು ಪಡೆದ ಮೂರು ಪಂಗಡದ ಜನರನ್ನು ನಾವು ನೋಡಬಹುದೆಂದು ಹಾರ್ನಿ ಸಲಹೆಯನ್ನು ಕೊಟ್ಟಿದ್ದಾಳೆ. ಮೊರೆನೋ ಎಂಬ ಮತ್ತೊಬ್ಬ ಸಿದ್ಧಾಂತಿಯು ವ್ಯಕ್ತಿತ್ವದ ರಚನೆಯ ವಿಚಾರವಾಗಿ ವಿಮರ್ಶಿಸುವ ಸಂದರ್ಭದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನಗಾಗಿ ಒಂದು ವಿಧದ ಪಾತ್ರವನ್ನೂ ಮತ್ತು ಇತರರಿಗಾಗಿ ಇನ್ನೊಂದು ವಿಧದ ಪಾತ್ರವನ್ನೂ ಅಭಿನಯಿಸುತ್ತಾನೆಂದು ಅಭಿಪ್ರಾಯಪಟ್ಟಿದ್ದಾನೆ. ಕಾರ್ಲ್ ರೋಜರ್ಸ್ ಎಂಬ ಮನಶ್ಶಾಸ್ತ್ರಜ್ಞನು ಇಪ್ಪತ್ತೆರಡು ಸಲಹೆಗಳಿಂದ ಕೂಡಿದ ವ್ಯಕ್ತಿತ್ವದ ಸಿದ್ಧಾಂತವನ್ನು ಸೂಚಿಸಿದ್ದಾನೆ. ಆತ್ಮೋದ್ಧಾರವೇ ರೋಜರ್ಸ್‌ನ ಸಿದ್ಧಾಂತಕ್ಕೆ ಮೂಲಾಧಾರವಾಗಿದೆ. ಜಿ. ಡಬ್ಲ್ಯು. ಆಲ್‌ಪೋರ್ಟ್ ಎಂಬ ಮನೋವಿಜ್ಞಾನಿಯು ಗುಣಗಳನ್ನು ಆಧಾರವನ್ನಾಗಿಟ್ಟುಕೊಂಡು ಜನರ ವ್ಯಕ್ತಿತ್ವದ ರಚನೆಯನ್ನು ಚಿತ್ರಿಸಿದ್ದಾನೆ. ರೆಮೂಂಡ್ ಕಟೇಲ್ ಎಂಬ ಮನೋವಿಜ್ಞಾನಿಯು ಇಂತಹ ಸಿದ್ಧಾಂತಕ್ಕೆ ನೆರವಾಗುವಂತೆ ಅನೇಕ ಸಂಶೋಧನೆಗಳನ್ನು ನಡೆಸಿ ವ್ಯಕ್ತಿತ್ವವು ಗುಣಗಳ ನಮೂನೆಗೂ ಮತ್ತು ಆವರಣದ ನಮೂನೆಗೂ ಮಧ್ಯೆ ನಡೆಯುವ ಅನ್ಯೋನ್ಯ ಕ್ರಿಯೆಯ ಫಲಿತಾಂಶವೆಂಬ ನಿರ್ಧಾರಕ್ಕೆ ಬಂದಿದ್ದಾನೆ. ಇದೇ ರೀತಿಯ ಅಭಿಪ್ರಾಯವು ಐಸೆಂಕ್ ಎಂಬ ವಿಜ್ಞಾನಿಯಿಂದ ದೊರೆತಿದ್ದರೂ, ಅವನ ಸಿದ್ಧಾಂತದಲ್ಲಿ ಅಭಿಪ್ರೇರಣೆಗೆ ಪ್ರಾಶಸ್ತ್ಯವಿಲ್ಲ. ಮೌರರ್, ಗೋಲ್ಡ್‌ಸ್ಟೈನ್, ಮ್ಯಾಸ್ಲೋ, ಫ್ರಂ ಮೊದಲಾದವರು ವ್ಯಕ್ತಿತ್ವದ ಕ್ಷೇತ್ರವು ವಿಕಾಸವಾಗುವುದಕ್ಕೆ ತಮ್ಮ ಸಂಶೋಧನೆಗಳಿಂದ ಸಹಾಯವನ್ನು ಮಾಡಿದ್ದಾರೆ.

ಆನ್ವಯಿಕ ಮನೋವಿಜ್ಞಾನವು (Applied Psychology) ಮೇಲೆ ತಿಳಿಸಿದಂತೆ ಮನೋವಿಜ್ಞಾನದ ಇನ್ನೊಂದು ಶಾಖೆ. ಶಿಕ್ಷಣ, ಉದ್ಯೋಗ, ವೈದ್ಯಕೀಯ ಕ್ಷೇತ್ರ, ಪ್ರಚಾರಕಾರ್ಯ,

ರೋಗಗಳ ಚಿಕಿತ್ಸೆ, ಸಮಾಜದ ಆಡಳಿತ, ಮತ್ತು ನಿತ್ಯಜೀವನ ದಲ್ಲಿ ಮನಶ್ಶಾಸ್ತ್ರವನ್ನು ಯಾವ ರೀತಿಯಲ್ಲಿ ಬಳಸಬಹುದು ಎಂಬ ಅಂಶವನ್ನು ವಿಮರ್ಶಿಸುವುದು ಈ ಕ್ಷೇತ್ರಕ್ಕೆ ಸೇರಿದವರು ಮಾಡುವ ಕೆಲಸ. ಆನ್ವಯಿಕ ಮನೋವಿಜ್ಞಾನದ ಕ್ಷೇತ್ರದಲ್ಲಿ ಸಿದ್ಧಾಂತಗಳ ವಿಮರ್ಶೆಗಾಗಲೀ ಅಥವಾ ಅವುಗಳ ವಿಶ್ಲೇಷಣೆ ಗಾಗಲೀ ಅವಕಾಶವಿಲ್ಲ. ಮನೋವಿಜ್ಞಾನದ ತತ್ವಗಳನ್ನು ಯಾವ ರೀತಿಯಲ್ಲಿ ಸದುಪಯೋಗಪಡಿಸಿಕೊಳ್ಳಬಹುದೆಂಬುದೇ ಈ ಕ್ಷೇತ್ರದ ವಿಷಯ. ಇಂತಹ ವಿಮರ್ಶೆಯು ಪ್ರತ್ಯೇಕವಾದ ಶಾಖೆಗಳ ಮೇಲೆ ಬರೆದಿರುವ ಗ್ರಂಥಗಳಲ್ಲಿರುತ್ತದೆ. ಉದಾಹರಣೆ ಗಾಗಿ ಶಿಕ್ಷಣ ಕ್ಷೇತ್ರವನ್ನು ತೆಗೆದುಕೊಂಡರೆ ಶಿಕ್ಷಣ ಮನೋ ವಿಜ್ಞಾನದಲ್ಲಿ ಅನೇಕ ಸಿದ್ಧಾಂತಗಳೂ ಮತ್ತು ಅವುಗಳ ಮೇಲೆ ನಡೆದಿರುವ ವಿಶ್ಲೇಷಣೆಯೂ ದೊರೆಯುತ್ತವೆ. ಆನ್ವಯಿಕ ಮನೋವಿಜ್ಞಾನದಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೊಡುವ ಅಂಶ ಗಳನ್ನು ಪರೀಕ್ಷಿಸಿದರೆ ಮನೋವೈಜ್ಞಾನಿಕ ತತ್ವಗಳ ಉಪಯೋಗ ದಿಂದ ಶಿಕ್ಷಣದ ಮಟ್ಟವನ್ನು ಉತ್ತಮಗೊಳಿಸುವುದು, ಅಲ್ಪ ಶ್ರಮದಿಂದ ಹೆಚ್ಚು ಅಂಶಗಳನ್ನು ಗ್ರಹಿಸುವಂತೆ ಮಾಡುವುದು, ಇವೇ ಮೊದಲಾದ ವಿಷಯಗಳು ಕಂಡುಬರುತ್ತವೆ. ಇದೇ ರೀತಿ ಯಲ್ಲಿ ಮನೋವೈಜ್ಞಾನಿಕ ತತ್ವಗಳ ಬಳಕೆಯಿಂದ ಕೈಗಾರಿಕೆಗಳು ಅಭಿವೃದ್ಧಿಯನ್ನು ಹೊಂದುವಂತೆ ಮಾಡುವುದು ಆನ್ವಯಿಕ ಮನೋವಿಜ್ಞಾನಿಗಳ ಕರ್ತವ್ಯ. ಸಾಮಾನ್ಯವಾಗಿ ಕೆಲಸಗಾರ ರನ್ನು ಆರಿಸಬೇಕಾದರೆ ಮನೋವೈಜ್ಞಾನಿಕ ಪರೀಕ್ಷೆಗಳ ಸಹಾಯ ವನ್ನು ತೆಗೆದುಕೊಳ್ಳುವುದು ಅತ್ಯಾವಶ್ಯಕ. ಇದರಂತೆಯೇ, ಕೆಲಸಗಾರರನ್ನು ಆರಿಸಿದ ನಂತರ ಅವರಿಗೆ ಯೋಗ್ಯವಾದ ಕೆಲಸ ಗಳನ್ನು ಕೊಡುವುದು ಮತ್ತು ಕೆಲಸಗಾರರಿಗೂ ಮತ್ತು ಆಡಳಿತ ಗಾರರಿಗೂ ಮಧ್ಯೆ ಮಾನವತಾ ಸಂಬಂಧವನ್ನು ಹೆಚ್ಚಿಸುವುದು

ಮನೋವಿಜ್ಞಾನಿಗಳು ಉದ್ಯೋಗದ ಕ್ಷೇತ್ರದಲ್ಲಿ ಮಾಡುವ ಕೆಲಸ.

ಸಾಂಘಿಕ ಮನೋವಿಜ್ಞಾನವೂ (Social Psychology) ಮನೋವಿಜ್ಞಾನದ ಒಂದು ಶಾಖೆಯಾಗಿದ್ದು ಜನರ ಪರಸ್ಪರ ಸಂಪರ್ಕವನ್ನು ಹೆಚ್ಚಿಸುವುದಕ್ಕೆ ಅನುಕೂಲವಾಗಿದೆ. ಈ ಶಾಖೆಯು ಜನರ ಸಮೂಹ ಅಥವಾ ಪ್ರಾಣಿಗಳ ಸಮೂಹಕ್ಕೆ ಸಂಬಂಧಿಸಿದಂತಿದೆ. ಜನರು ಸಮೂಹದಲ್ಲಿದ್ದಾಗ ಯಾವ ರೀತಿಯಲ್ಲಿ ವರ್ತಿಸುತ್ತಾರೆ ಮತ್ತು ಪ್ರಾಣಿಗಳ ಸಾಮೂಹಿಕ ವರ್ತನೆಯು ಯಾವ ರೀತಿಯಲ್ಲಿರುತ್ತದೆ ಎಂಬ ವಿಚಾರದ ವಿಮರ್ಶೆಯು ಸಾಂಘಿಕ ಮನೋವಿಜ್ಞಾನದ ಕ್ಷೇತ್ರದಲ್ಲಿ ನಡೆಯುತ್ತದೆ. ಜನರ ಮತ್ತು ಪ್ರಾಣಿಗಳ ಸಾಮೂಹಿಕ ವರ್ತನೆಯನ್ನು ಯಾವ ರೀತಿಯಲ್ಲಿ ಬದಲಾಯಿಸಬಹುದು ಎಂಬ ಸಮಸ್ಯೆಯೂ ಈ ಕ್ಷೇತ್ರಕ್ಕೇ ಸೇರಿದೆ. ಜನರ ಅಭಿವೃತ್ತಿಗಳು, ನಾಯಕತ್ವ, ಪೂರ್ವಾಗ್ರಹಗಳು, ಬಿಕ್ಕಟ್ಟು, ಅನ್ಯೋನ್ಯ ಸಂಬಂಧ, ಅಭಿಪ್ರಾಯ, ಪ್ರಚಾರಕಾರ್ಯ ಮೊದಲಾದ ಅಂಶಗಳನ್ನು ಸಾಂಘಿಕ ಮನೋವಿಜ್ಞಾನಿಗಳು ವಿಮರ್ಶಿಸುತ್ತಾರೆ. ಸಾಂಘಿಕ ನ್ಯೂನತೆಗಳಿಗೆ ಮೂಲಕಾರಣಗಳನ್ನು ಹುಡುಕಿ ಅವುಗಳ ನಿವಾರಣೆಗೆ ಸಲಹೆಗಳನ್ನು ಕೊಡುವುದು ಸಾಂಘಿಕ ಮನೋವಿಜ್ಞಾನಿಗಳ ಕೆಲಸ.

ಉದ್ಯೋಗ ಕ್ಷೇತ್ರವಲ್ಲಿಯೂ ಜನರ ಅಭಿವೃತ್ತಿಯನ್ನು ಅನೇಕ ಸಂದರ್ಭಗಳಲ್ಲಿ ಬದಲಾಯಿಸಬೇಕಾಗುತ್ತದೆ. ಉದಾಹರಣೆಗೆ, ಒಂದು ಕಾರ್ಖಾನೆಯಿಂದ ತಯಾರಿಸಲ್ಪಟ್ಟ ವಸ್ತುವನ್ನು ಜನರು ಕೊಂಡುಕೊಳ್ಳುವುದಕ್ಕೆ ನಿರಾಕರಿಸಿದಾಗ ಅದನ್ನು ಕೊಂಡುಕೊಳ್ಳುವಂತೆ ಮಾಡಬೇಕಾದರೆ ಮನೋವೈಜ್ಞಾನಿಕ ಸಾಧನಗಳ ಸಹಾಯವನ್ನು ತೆಗೆದುಕೊಳ್ಳಬೇಕಾಗುತ್ತದೆ. ಸಲಹೆಗಳನ್ನು ಜನರ ಮನಸ್ಸಿಗೆ ಹಿಡಿಯುವಂತೆ ಕೊಡುವುದರಿಂದ ಇಂತಹ ಅಭಿವೃತ್ತಿಯನ್ನು ಬದಲಾಯಿಸಬಹುದು. ಕೆಲಸಗಾರರು ಮುಷ್ಕರ

ವನ್ನು ಹೊಡಿದ ಕಾಲದಲ್ಲಿಯೂ ಮನೋವೈಜ್ಞಾನಿಕ ವಿಧಾನಗಳು ಉಪಯೋಗಕ್ಕೆ ಬರುತ್ತವೆ. ಉದಾಹರಣೆಗೆ, ಒಂದು ದೊಡ್ಡ ಕಾರ್ಖಾನೆಯಲ್ಲಿ ಕೆಲಸಗಾರರಿಗೆ ಆಡಳಿತ ವರ್ಗದವರ ವಿಚಾರವಾಗಿ ಇರುವ ಅಭಿವೃತ್ತಿಯನ್ನು ಮನೋವೈಜ್ಞಾನಿಕ ವಿಧಾನಗಳಿಂದ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿದಾಗ ಕಾರ್ಮಿಕರಲ್ಲಿ ಅನೇಕರಿಗೆ ಹೆಚ್ಚು ಸಂಬಳಕ್ಕಿಂತ ಹೆಚ್ಚಾಗಿ ಅವರ ಮೇಲ್ಪಟ್ಟ ಅಧಿಕಾರಿಗಳಿಂದ ಒಳ್ಳೆಯ ವರ್ತನೆಯ ಆವಶ್ಯಕತೆ ಇದ್ದ ಅಂಶವು ಬೆಳಕಿಗೆ ಬಂದಿತು. ಕಾರ್ಖಾನೆಗಳ ಉತ್ಪಾದನೆಯು ಹೆಚ್ಚಬೇಕಾದರೆ ಕಾರ್ಮಿಕರ ಪೂರ್ಣ ಸಹಕಾರವು ಬೇಕಾಗುತ್ತದೆ. ಪೂರ್ಣ ಸಹಕಾರವು ದೊರೆಯಬೇಕಾದರೆ ಅವರ ಅಭಿವೃತ್ತಿ, ವ್ಯಕ್ತಿತ್ವ ಮೊದಲಾದ ಅಂಶಗಳ ವಿಚಾರವಾಗಿ ತಿಳಿವಳಿಕೆ ಆವಶ್ಯಕ. ಇದರ ಸಂಗ್ರಹಣೆಗೂ ಮತ್ತು ವಿಶ್ಲೇಷಣೆಗೂ ಔದ್ಯೋಗಿಕ ಮನೋವಿಜ್ಞಾನಿಗಳ (Industrial Psychologists) ಸಹಾಯವು ಬೇಕಾಗುತ್ತದೆ.

ಉದ್ಯೋಗ ಕ್ಷೇತ್ರದಲ್ಲಿ ಜನರನ್ನು ಕೆಲಸಗಳಿಗೆ ಆರಿಸುವಾಗ ಮನೋವೈಜ್ಞಾನಿಕ ವಿಧಾನಗಳನ್ನು ಬಳಸುವುದು ಸೂಕ್ತವಾದದ್ದೆಂದು ಹಿಂದೆಯೇ ತಿಳಿಸಿದ್ದಾಗಿದೆ. ಈ ಅಂತಸ್ತಿನಲ್ಲಿ ಮನೋವಿಜ್ಞಾನಿಗಳ ಮತ್ತು ಕಾರ್ಮಿಕ ಸಂಸ್ಥೆಗಳ ಆಡಳಿತಗಾರರ ಶ್ರಮವು ಕಡಿಮೆಯಾಗುವಂತೆ ಮಾಡಬಹುದು. ಕೆಲಸದ ವಿಚಾರವಾಗಿ ವ್ಯಕ್ತಿಯು ಪ್ರೌಢಶಾಲೆಯನ್ನು ಬಿಡುವ ಕಾಲದಲ್ಲಿಯೇ ಮಾರ್ಗದರ್ಶನವನ್ನು (Vocational Guidance) ಕೊಡುವುದರಿಂದ ನಿಷ್ಕಾರಣವಾಗಿ ತನಗೆ ಸಂಬಂಧಿಸದ ಕೆಲಸದ ಕ್ಷೇತ್ರದಲ್ಲಿ ಕಾಲಿಡದಂತೆ ಮುನ್ನೆಚ್ಚರಿಕೆಯನ್ನು ಕೊಡಬಹುದು. ಇದರಿಂದ ಆಡಳಿತಗಾರರಿಗೆ ಸರಿಯಾದ ವ್ಯಕ್ತಿಗಳನ್ನು ಕೆಲಸಗಳಿಗಾಗಿ ಆರಿಸುವುದಕ್ಕೆ ಸಹಾಯವನ್ನು ಮಾಡಿದಂತಾಗುತ್ತದೆ. ಇಂತಹ

ಕೆಲಸವನ್ನು ವೃತ್ತಿ–ಮಾರ್ಗದರ್ಶನದ ಕ್ಷೇತ್ರಕ್ಕೆ ಸೇರಿದ ಮನೋವಿಜ್ಞಾನಿಗಳು ಮಾಡುತ್ತಾರೆ. ಬುದ್ಧಿಶಕ್ತಿಯ, ವ್ಯಕ್ತಿತ್ವದ, ಅಭಿವೃತ್ತಿಯ ಮತ್ತು ಆಸಕ್ತಿಯ ಪರೀಕ್ಷೆಗಳನ್ನು ಕೊಡುವುದರಿಂದ ಅವರು ಮಾರ್ಗದರ್ಶನಕ್ಕಾಗಿ ಬಂದ ವ್ಯಕ್ತಿಗೆ ಯಾವ ವೃತ್ತಿಯು ಸರಿಯಾದದ್ದೆಂದು ನಿರ್ಧರಿಸುತ್ತಾರೆ. ಇಂತಹ ಮಾರ್ಗದರ್ಶನವನ್ನು ವ್ಯಕ್ತಿಗಳ ನಿತ್ಯಜೀವನಕ್ಕೆ ಸಂಬಂಧಿಸಿದಂತೆಯೂ ಅವಶ್ಯಕವಿದ್ದಾಗ ಕೊಡುವುದು ರೂಢಿಯಲ್ಲಿದೆ.

ಮನೋವೈಜ್ಞಾನಿಕ ಪರೀಕ್ಷೆಗಳನ್ನು, ವಿಶೇಷವಾಗಿ ಪ್ರಶ್ನಾವಳಿಗಳ ರೂಪದಲ್ಲಿರುವ ಪರೀಕ್ಷೆಗಳನ್ನು, ಉಪಯೋಗಕ್ಕೆ ಬರುವಂತೆ ಸಿದ್ಧಪಡಿಸಬೇಕಾದರೆ ಮನೋಮಿತಿಶಾಸ್ತ್ರದ (Psychometry) ನೆರವು ಬೇಕಾಗುತ್ತದೆ. ಮನೋಮಿತಿಶಾಸ್ತ್ರವೂ ಮನೋವಿಜ್ಞಾನದ ಒಂದು ಶಾಖೆ. ಪ್ರಶ್ನಾವಳಿಗಳಲ್ಲಿ ಹೇಳಿಕೆಗಳನ್ನು ಯಾವ ಪರಿಮಿತಿಯಲ್ಲಿ ಇಟ್ಟುಕೊಳ್ಳಬೇಕು, ಪ್ರಶ್ನಾವಳಿಯಲ್ಲಿ ಯಾವ ಭಾಗದಲ್ಲಿ ಒಂದು ಹೇಳಿಕೆಯನ್ನಾಗಲೀ ಅಥವಾ ಪ್ರಶ್ನೆಯನ್ನಾಗಲೀ ಇಡುವುದರಿಂದ ಅದರ ಉಪಯೋಗದ ಸಾಧನೆಯಾಗುತ್ತದೆಯೇ ಅಥವಾ ಇಲ್ಲವೇ, ಪ್ರಯೋಗಗಳನ್ನು, ನಡೆಸುವಾಗ ನಾವು ಅನುಸರಿಸುವ ಪದ್ಧತಿಗಳಲ್ಲಿರುವ ಲೋಪದೋಷಗಳು ಇವೇ ಮೊದಲಾದ ಅಂಶಗಳು ಮನೋಮಿತಿಶಾಸ್ತ್ರದಲ್ಲಿ ವಿಮರ್ಶಿಸಲ್ಪಡುತ್ತವೆ. ಮನೋವಿಜ್ಞಾನದ ವಿಷಯಗಳಮೇಲೆ ಸಂಶೋಧನೆಗಳನ್ನು ನಡೆಸಬೇಕಾದರೆ ಸಂಖ್ಯಾಶಾಸ್ತ್ರದಲ್ಲಿ ಶಿಕ್ಷಣವನ್ನು ಹೊಂದುವುದು ಅನಿವಾರ್ಯವಾಗಿರುತ್ತದೆ. ಸಾಮಾನ್ಯವಾಗಿ ಜನರು ಯಾವುದಾದರೂ ಒಂದು ವಿಷಯದಲ್ಲಿ ಒಂದು ವಿಧವಾದ ಅಭಿಪ್ರಾಯವನ್ನಿಟ್ಟುಕೊಂಡು ಇದು ಎಲ್ಲರಿಗೂ ಅನ್ವಯಿಸುವುದೆಂದು ನಂಬಿದ್ದರೆ ಸಂಖ್ಯಾಶಾಸ್ತ್ರದ ವಿಧಾನಗಳಿಂದ ಇದು ತಪ್ಪಾದ ಅಭಿಪ್ರಾಯವೆಂದು ವ್ಯಕ್ತವಾಗಬಹುದು. ಇಂತಹ ಸನ್ನಿವೇಷ

ವನ್ನು ನೋಡಿದರೆ ಮನೋವಿಜ್ಞಾನದ ವಿಷಯದಲ್ಲಿ ಸಂಖ್ಯಾಶಾಸ್ತ್ರದ ಒರೆಗಲ್ಲಿಗೆ ಸಿಕ್ಕದ ಅಂಶವು ಯಾವುದೂ ಇಲ್ಲ. ಅಂತಹ ಯಾವುದಾವರೂ ಹೊಸ ಅಂಶವು ಕಂಡುಬಂದರೂ ಅದನ್ನೂ ಸಂಖ್ಯಾಶಾಸ್ತ್ರದ ವಿಧಾನಗಳಿಂದಲೇ ಶೋಧಿಸುವ ಕೆಲಸವು ನಡೆಯುತ್ತದೆ. ಸಂಖ್ಯಾಶಾಸ್ತ್ರದ ಪರೀಕ್ಷೆಯಿಂದ ನಿರ್ಧರಿಸಲ್ಪಟ್ಟ ಅಂಶಗಳೇ ಮನೋವಿಜ್ಞಾನದ ಕ್ಷೇತ್ರವನ್ನು ಪ್ರವೇಶಿಸುವುದಕ್ಕೆ ಯೋಗ್ಯವಾದವುಗಳೆಂದು ಮನೋವಿಜ್ಞಾನಿಗಳ ಅಭಿಪ್ರಾಯ.

ಶರೀರಕ್ರಿಯಾ ಮನೋವಿಜ್ಞಾನವು (Physiological psychology) ಶರೀರದ ಕ್ರಿಯೆಗಳಿಗೂ ಮತ್ತು ಮಾನಸಿಕ ಪರಿಸ್ಥಿತಿಗೂ ಇರುವ ಸಂಬಂಧವನ್ನು ಸೂಚಿಸುವ ಶಾಖೆ. ಮಾನಸಿಕ ಸ್ಥಿತಿಯಲ್ಲಿ ಬದಲಾವಣೆಗಳಾದಂತೆಲ್ಲ ಪ್ರಾಣಿಗಳ ದೇಹದ ಒಳಭಾಗದಲ್ಲಿ ನಡೆಯುವ ರಸಾಯನಿಕ ಕ್ರಿಯೆಗಳಲ್ಲಿ ವ್ಯತ್ಯಾಸಗಳಾಗುವ ಅಂಶವನ್ನು ಈ ಕ್ಷೇತ್ರದಲ್ಲಿ ನಡೆಯುವ ವಿಮರ್ಶೆಯಿಂದ ತಿಳಿಯಬಹುದು. ಮಿದುಳಿನ ಮತ್ತು ನರಮಂಡಲದ ರಚನೆ, ನರದ ಮೂಲಕ ಪ್ರವಹಿಸುವ ಆವೇಗದ ಸ್ವರೂಪ, ವಿವಿಧ ಸನ್ನಿವೇಶದಲ್ಲಿ ಪ್ರಾಣಿಗಳ ವರ್ತನೆಗೆ ಸಂಬಂಧಿಸಿದಂತೆ ನರಮಂಡಲದಲ್ಲಾಗುವ ವ್ಯತ್ಯಾಸಗಳು, ಮಿದುಳಿನ ವಿವಿಧ ಕೇಂದ್ರಗಳಿಗೂ ಮತ್ತು ಪ್ರಾಣಿಗಳ ವರ್ತನೆಗೂ ಇರುವ ಸಂಬಂಧ, ಮಾದಕ ಪದಾರ್ಥಗಳ ಸೇವನೆಯಿಂದ ಶಾರೀರಕ ಕ್ರಿಯೆಗಳಲ್ಲಾಗುವ ಬದಲಾವಣೆ ಇವೇ ಮೊದಲಾದ ಅಂಶಗಳ ವಿಮರ್ಶೆಯು ಶರೀರಕ್ರಿಯಾ ಮನೋವಿಜ್ಞಾನದ ಕ್ಷೇತ್ರದಲ್ಲಿ ನಡೆಯುತ್ತದೆ. ಇವುಗಳ ಜೊತೆಗೆ ಜ್ಞಾನೇಂದ್ರಿಯಗಳ ರಚನೆ ಮತ್ತು ಅವು ಯಾವ ರೀತಿಯಲ್ಲಿ ತಮ್ಮ ಕೆಲಸವನ್ನು ನಿರ್ವಹಿಸುತ್ತವೆ. ಎಂಬ ಅಂಶಗಳ ವಿವರಣೆಯನ್ನೂ ಈ ಕ್ಷೇತ್ರದಲ್ಲಿ ನೋಡಬಹುದು. ಶರೀರಕ್ರಿಯಾ ಮನೋವಿಜ್ಞಾನದಲ್ಲಿ ಪ್ರಾಣಿಗಳ ಮಾಂಸಖಂಡಗಳ ರಚನೆ ಮತ್ತು ಅವುಗಳ ವೈವಿಧ್ಯದ

ವಿಚಾರವಾಗಿಯೂ ವಿಮರ್ಶೆಯು ದೊರೆಯುತ್ತದೆ.

ತೌಲನಿಕ ಮನೋವಿಜ್ಞಾನವು (Comparative Psychology) ಪ್ರಾಣಿಗಳ ಮನಶ್ಶಾಸ್ತ್ರವೆಂಬ ಹೆಸರಿನಿಂದ ಮೊಟ್ಟ ಮೊದಲು ಕರೆಯಲ್ಪಟ್ಟಿತು. ಪ್ರಾಣಿಗಳ ವರ್ತನೆಗೆ ಸಂಬಂಧಿಸಿದಂತೆ ಈ ಕ್ಷೇತ್ರದಲ್ಲಿ ವಿಮರ್ಶೆಯನ್ನು ನಡೆಸುತ್ತಿದ್ದುದೇ ಇದಕ್ಕೆ ಕಾರಣವಾಗಿತ್ತು. ಸೃಷ್ಟಿಯಲ್ಲಿರುವ ಅನೇಕ ವಿಧದ ಪ್ರಾಣಿಗಳ ವರ್ತನೆಯನ್ನು ಹೋಲಿಸಿನೋಡಿ ಅದರಲ್ಲಿರುವ ವ್ಯತ್ಯಾಸವನ್ನು ಕಂಡುಹಿಡಿಯುವ ಉದ್ದೇಶದಿಂದ ಕೂಡಿದ ಮನೋವಿಜ್ಞಾನಿಗಳು ಇದನ್ನು ತೌಲನಿಕ ಮನೋವಿಜ್ಞಾನವೆಂದು ಕರೆದರು. ಆರಂಭ ಕಾಲದಲ್ಲಿ ಪ್ರಾಣಿಮನೋವಿಜ್ಞಾನದ ಕ್ಷೇತ್ರದಲ್ಲಿ ಪ್ರಾಣಿಗಳ ವಿಚಾರವಾಗಿ ಅಂಶಗಳನ್ನು ಸಂಗ್ರಹಿಸಬೇಕಾದರೆ ಕತೆಗಳ ಮೂಲಕ ಈ ಕೆಲಸವು ನಡೆಯುತ್ತಿದ್ದಿತು. ಈ ವಿಧಾನದಿಂದ ಅಂಶಗಳನ್ನು ಸಂಗ್ರಹಿಸುವುದರಲ್ಲಿ ಜನರು ತಮ್ಮ ಮನಸ್ಸಿಗೆ ಬಂದಂತೆ ವ್ಯವಹರಿಸುವುದಕ್ಕೆ ಅವಕಾಶವಿದ್ದಿತು. ಇದರ ಜೊತೆಗೆ ಜನರು ತಮ್ಮಲ್ಲಿರುವ ವ್ಯವಹಾರಗಳೇ ಪ್ರಾಣಿಗಳ ಅಂತಸ್ಥಿನಲ್ಲಿಯೂ ಇರುವುವೆಂಬ ದೃಷ್ಟಿಯನ್ನಿಟ್ಟುಕೊಂಡು ಅಂಶಗಳನ್ನು ಸಂಗ್ರಹಿಸುವುದಕ್ಕೆ ಪ್ರಯತ್ನಿಸುತ್ತಿದ್ದರು. ಇದು ಸರಿಯಾದದ್ದಲ್ಲವೆಂದು ಮಾರ್ಗನ್ ಎಂಬಾತನು ಸಾಧಿಸಿದನು. ಇದಾದ ನಂತರ ಪ್ರಾಣಿಗಳ ವರ್ತನೆಯನ್ನು ಪ್ರಾಯೋಗಿಕ ವಿಧಾನಗಳಿಂದ ನಿರ್ಧರಿಸುವುದು ಅಭ್ಯಾಸಕ್ಕೆ ಬಂದಿತು. ಈಗ ತೌಲನಿಕ ಮನೋವಿಜ್ಞಾನವು ಎಷ್ಟರಮಟ್ಟಿಗೆ ಮುಂದುವರಿದೆಯೆಂದರೆ ಈ ಕ್ಷೇತ್ರದಲ್ಲಿ ನಡೆಯುತ್ತಿರುವ ಸಂಶೋಧನೆಗಳಿಗೆ ಅನೇಕ ಅಮೂಲ್ಯವಾದ ಯಂತ್ರೋಪಕರಣಗಳನ್ನು ಬಳಸಲಾಗುತ್ತಿದೆ. ಜೀವರಸಾಯನ ಶಾಸ್ತ್ರಕ್ಕೂ, ಪ್ರಾಣಿಶಾಸ್ತ್ರಕ್ಕೂ ಮತ್ತು ತೌಲನಿಕ ಮನೋವಿಜ್ಞಾನಕ್ಕೂ ಪರಸ್ಪರ ಸಂಬಂಧವಿರುವುದು ಈಗ ತಿಳಿದುಬಂದಿದೆ.

ಈ ಮೇಲೆ ತಿಳಿಸಿದ ಶಾಖೆಗಳ ಜೊತೆಗೆ ಸೈನಿಕ ಮನೋವಿಜ್ಞಾನವೆಂಬ (Military psychology) ಒಂದು ಶಾಖೆಯಿದೆ. ಯುದ್ಧಗಳನ್ನು ನಡೆಸುವುದರಲ್ಲಿ ಮನೋವೈಜ್ಞಾನಿಕ ತತ್ವಗಳನ್ನು ಬಳಸಿ ಜಯವನ್ನು ಗಳಿಸುವುದು ಈ ಶಾಖೆಗೆ ಸೇರಿದವರು ಮಾಡುವ ಕೆಲಸ. ಈ ಸಂದರ್ಭದಲ್ಲಿ ಬಹಳ ಎತ್ತರದವರೆಗೂ ಹೋಗುವ ಜನರ ಮೇಲಾಗುವ ಪರಿಣಾಮವನ್ನೂ, ಅದರಿಂದ ಅವರ ವರ್ತನೆಯಲ್ಲಾಗುವ ಬದಲಾವಣೆಯನ್ನೂ ಅಳೆಯುವುದಕ್ಕೆ ಅವಕಾಶವಿದೆ. ಮತೀಯ ಮನೋವಿಜ್ಞಾನವೆಂಬ (Phychology of Religion) ಇನ್ನೊಂದು ಶಾಖೆಯಲ್ಲಿ ಪ್ರಪಂಚದ ಎಲ್ಲಾ ಧರ್ಮಗಳಿಗೂ, ಅನ್ವಯಿಸುವಂತೆ ಮನೋವೈಜ್ಞಾನಿಕ ಅಂಶಗಳು ತಮ್ಮ ಪಾತ್ರವನ್ನು ವಹಿಸುವ ವಿಚಾರವಾಗಿ ವಿಶ್ಲೇಷಣೆಯು ದೊರೆಯುತ್ತದೆ. ಉದಾಹರಣೆಗೆ, ದೈವಭಕ್ತಿಯು ಕೇವಲ ಬಡವರು ತೋರಿಸುವುದೋ ಅಥವಾ ಧನಿಕರೂ ತೋರಿಸುತ್ತಾರೆಯೋ ಎಂಬ ಸಮಸ್ಯೆ, ತಮ್ಮ ಕಷ್ಟದ ನಿವಾರಣೆಗಾಗಿ ಜನರು ದೇವರಲ್ಲಿ ಭಕ್ತಿಯನ್ನುಳ್ಳವರಾಗುತ್ತಾರೆಯೇ ಎಂಬ ಸಮಸ್ಯೆ, ದೈವಭಕ್ತಿಯು ಬೆಳೆಯುವುದು ಹೆಚ್ಚಾಗಿ ವ್ಯಕ್ತಿಯು ಪ್ರಾಯದ ಅಂತಸ್ತಿನಲ್ಲಿದ್ದಾಗ ಎನ್ನುವ ಸಮಸ್ಯೆ, ದೇವರ ಹೆಸರಿನಲ್ಲಿ ಅಸಾಧಾರಣವಾದ ಕೆಲಸವನ್ನು ಮಾಡುವುದರಲ್ಲಿ ಜನರಿಗೆ ದೊರೆಯುವ ಮನೋವೈಜ್ಞಾನಿಕ ತೃಪ್ತಿ, ಇವೇ ಮೊದಲಾದ ಅಂಶಗಳ ವಿಮರ್ಶೆಯು ಈ ಶಾಖೆಯಲ್ಲಿ ನಡೆಯುತ್ತದೆ. ಧಾರ್ಮಿಕ ಅನುಭವಗಳು ಯಾವ ರೀತಿಯಲ್ಲಿ ವ್ಯಕ್ತಿಗೆ ಉಂಟಾಗುತ್ತವೆ ಎಂದು ಅರಿತುಕೊಳ್ಳುವುದೇ ಮತೀಯ ಮನೋವಿಜ್ಞಾನಿಗಳ ಉದ್ದೇಶ. ಇದಕ್ಕಾಗಿಯೇ ಅವರು ಅನೇಕ ಸಂಶೋಧನೆಗಳನ್ನು ನಡೆಸಿದರೂ ಇನ್ನೂ ಒಂದು ನಿರ್ಧಾರಕ್ಕೆ ಬಂದಂತೆ ಕಂಡುಬರುವುದಿಲ್ಲ.

ಶಿಶುಮನೋವಿಜ್ಞಾನ (Child psychology) ಅಪರಾಧ

ಮನೋವಿಜ್ಞಾನ (Psychology of Crime) ಮತ್ತು ಬಾಲಾಪರಾಧಗಳು (Juvenile Delinquency) ಮನೋವಿಜ್ಞಾನಕ್ಕೆ ಸೇರಿದ ಇತರ ಶಾಖೆಗಳು. ಮಕ್ಕಳು ಯಾವ ರೀತಿಯಲ್ಲಿ ಬೆಳೆಯುತ್ತವೆ, ಅವುಗಳ ದೈಹಿಕ ಬೆಳವಣಿಗೆಯು ಮುಂದುವರಿದು ಹೋದಂತೆಲ್ಲ, ಮಾನಸಿಕ ಬೆಳವಣಿಗೆಯು ಯಾವ ರೀತಿಯಲ್ಲಿ ವ್ಯತ್ಯಾಸವನ್ನು ಹೊಂದುತ್ತದೆ ಎಂಬ ಅಂಶಗಳನ್ನು ತಿಳಿದುಕೊಳ್ಳುವ ಕೆಲಸವು ಶಿಶು ಮನೋವಿಜ್ಞಾನದ ಶಾಖೆಯಲ್ಲಿ ನಡೆಯುತ್ತದೆ. ವ್ಯಕ್ತಿಯು ಹುಟ್ಟಿದ ಕಾಲದಿಂದ ಹಿಡಿದು ಸಾಯುವವರೆಗೂ ಅವನಲ್ಲಾಗುವ ಬದಲಾವಣೆಗಳನ್ನು ಮನೋವೈಜ್ಞಾನಿಕ ದೃಷ್ಟಿಯಿಂದ ಪರೀಕ್ಷಿಸುವುದು ಈ ಶಾಖೆಗೆ ಸೇರಿದವರು ಮಾಡುವ ಕೆಲಸ. ಇತ್ತೀಚೆಗೆ ಮಕ್ಕಳು ತಾಯಿಯ ಗರ್ಭದಲ್ಲಿರಬೇಕಾದರೆ ಅವುಗಳ ಮೇಲೆ ಆಗುವ ಪರಿಣಾಮಗಳನ್ನು ತಿಳಿದುಕೊಳ್ಳುವ ಪ್ರಯತ್ನವೂ ನಡೆದಿದೆ. ಉದಾಹರಣೆಗೆ, ಗರ್ಭಿಣಿಯರಾದ ಸ್ತ್ರೀಯರು ಪ್ರಸವಕಾಲಕ್ಕೆ ಮುಂಚಿತವಾಗಿ ಅನೇಕ ವಿಧವಾದ ಮಾನಸಿಕ ಅಸ್ವಸ್ಥತೆಯಿಂದ ನರಳಿದ್ದರೆ ಇದರ ದುಷ್ಪರಿಣಾಮವು ಗರ್ಭದ ಮೇಲೆ ಬಿದ್ದು ಅವರಿಂದ ಜನಿಸಿದ ಮಕ್ಕಳೂ ಮಾನಸಿಕ ಅಸ್ವಸ್ಥತೆಯಿಂದ ನರಳಬಹುದು. ಮನುಷ್ಯವರ್ಗಕ್ಕೆ ಸೇರಿದವರನ್ನು ಪ್ರಾಯೋಗಿಕ ಸನ್ನಿವೇಶಕ್ಕೆ ಗುರಿಪಡಿಸಿ ಈ ಅಂಶವನ್ನು ವಿಮರ್ಶಿಸುವುದಕ್ಕೆ ಕಾನೂನಿನ ಅಡಚಣೆ ಇದ್ದರೂ ನಮಗೆ ಸಮಾಜದಲ್ಲಿ ಇಂತಹ ಉದಾಹರಣೆಗಳು ದೊರೆಯುತ್ತವೆ. ಪ್ರಾಣಿಗಳ ಅಂತಸ್ತಿನಲ್ಲಿ ಸಂವೇಗದ ಪರಿಸ್ಥಿತಿಯಲ್ಲಿ ಬೆಳೆದ ತಾಯಿಯು ತನ್ನ ಮರಿಗೆ ಕ್ರೂರವಾದ ಶಿಕ್ಷೆಯನ್ನು ವಿಧಿಸುವುದನ್ನು ಸಂಶೋಧಕರು ನೋಡಿದ್ದಾರೆ. ಅಪರಾಧ ಮನೋವಿಜ್ಞಾನವೂ ವ್ಯಕ್ತಿತ್ವದ ಬೆಳವಣಿಗೆಗೆ ಸಂಬಂಧಿಸಿದ ಶಾಖೆ. ಈ ಶಾಖೆಯಲ್ಲಿ ಅಪರಾಧವನ್ನು ಮಾಡುವ ವ್ಯಕ್ತಿತ್ವದ ಬೆಳವಣಿಗೆಗೆ ಎಂತಹ ಆವರಣದ ಪರಿಸ್ಥಿತಿ ಇರಬೇಕು,

ಅಪರಾಧಿಯ ತಂದೆ ತಾಯಿಗಳು ಮತ್ತು ಕುಟುಂಬ ವರ್ಗದವರು ಯಾವ ವಿಧದವರು, ಬಾಲಾಪರಾಧಕ್ಕೂ ಮತ್ತು ಅಪರಾಧಕ್ಕೂ ಸಂಬಂಧವೇನಾದರೂ ಇದೆಯೇ, ಜನರ ಸಂಸ್ಕೃತಿಗೂ ಮತ್ತು ಅಪರಾಧಗಳನ್ನು ಮಾಡುವುದಕ್ಕೂ ಇರುವ ಸಂಬಂಧ—ಇವೇ ಮೊದಲಾದ ಸಮಸ್ಯೆಗಳಿಗೆ ಸರಿಯಾದ ಉತ್ತರಗಳನ್ನು ಹುಡುಕುವ ಪ್ರಯತ್ನವು ನಡೆಯುತ್ತದೆ. ಈ ಸಮಸ್ಯೆಗಳಿಗೆ ಸಂಶೋಧನೆಗಳ ನೆರವಿನಿಂದ ದೊರೆಯುವ ಉತ್ತರಗಳ ಆಧಾರದಮೇಲೆ ಅಪರಾಧ ವ್ಯಕ್ತಿತ್ವವು ಬೆಳೆಯದಂತೆ ತಡೆಗಟ್ಟುವುದಕ್ಕೆ ಸೂಕ್ತವಾದ ಸಲಹೆಗಳನ್ನೂ ಕೊಡುವುದು ರೂಢಿಯಲ್ಲಿದೆ. ಬಾಲಾಪರಾಧಗಳು ಕೇವಲ ಚಿಕ್ಕ ವಯಸ್ಸಿನ ಮಕ್ಕಳು ಮಾಡುವ ಅಪರಾಧಗಳು. ಇದು ಒಂದು ಪ್ರತ್ಯೇಕವಾದ ಶಾಖೆಯಾಗಿ ಬೆಳೆಯುತ್ತಿದೆ. ಬಾಲಾಪರಾಧಗಳನ್ನು ಸಕಾಲದಲ್ಲಿ ತಡೆಗಟ್ಟದಿದ್ದರೆ ಅಂತಹ ಅಪರಾಧಗಳನ್ನು ಮಾಡುವ ವ್ಯಕ್ತಿಗಳು ದೊಡ್ಡವರಾದಾಗ ದೊಡ್ಡ ಅಪರಾಧಗಳನ್ನು ಮಾಡಬಹುದು. ಏಕೆಂದರೆ ಅವರಿಗೆ ಅಪರಾಧಗಳನ್ನು ಮಾಡಿದ ಅನುಭವವಿರುತ್ತದೆ. ಈ ಕಾರಣದಿಂದ ಬಾಲಾಪರಾಧವು ಒಂದು ಮುಖ್ಯವಾದ ಶಾಖೆಯಾಗಿದೆ. ಇದರ ಜೊತೆಗೆ ಸಮಾಜದಲ್ಲಿ ವಿಲೋಪನ ವ್ಯವಹಾರದಲ್ಲಿ ತೊಡಗುವವರ ಸಂಖ್ಯೆಯು ಹೆಚ್ಚದಂತೆ ತಡೆಗಟ್ಟುವ ಆವಶ್ಯಕತೆಯೂ ಇದೆ. ಈ ಕಾರಣವನ್ನು ತೆಗೆದುಕೊಂಡರೂ ಅಪರಾಧ ಮನೋವಿಜ್ಞಾನ ಮತ್ತು ಬಾಲಾಪರಾಧಗಳಲ್ಲಿ ಸಂಶೋಧನೆಗಳನ್ನು ಮುಂದುವರಿಸಿಕೊಂಡು ಹೋಗುವುದರಿಂದ ಸಮಾಜಕ್ಕೆ ಹೆಚ್ಚು ಲಾಭವಿದೆ.

ಜನರು ತಂದೆತಾಯಿಗಳಂತೆ ಮಕ್ಕಳು ಇರುತ್ತಾರೆಂದು ನಂಬುವುದೂ ಮಕ್ಕಳಲ್ಲಿ ತಂದೆತಾಯಿಗಳಲ್ಲಿದ್ದ ವಿಶೇಷ ಗುಣಗಳು ಇಲ್ಲದಿರುವುದನ್ನು ನೋಡಿ ಆಶ್ಚರ್ಯಪಡುವುದೂ ಸಾಮಾನ್ಯವಾಗಿ

ಸಮಾಜದಲ್ಲಿ ಕಂಡುಬರುವ ವಿಷಯ ಇದು. ಒಂದು ಮೂಢ ನಂಬಿಕೆ. ಕೆಲವು ಸಂದರ್ಭಗಳಲ್ಲಿ ಇದು ನಿಜವಾಗಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ಅವರು ಯೋಚಿಸಿದಂತೆ ಇರದೇ ಬೇರೆ ರೀತಿಯಾಗಿರಬಹುದು. ಈ ಅಂಶವನ್ನು ತೆಗೆದುಕೊಂಡು ಮೆಂಡಲ್ ಮೊದಲಾದವರು ಅನೇಕ ಸಂಶೋಧನೆಗಳನ್ನು ನಡೆಸಿದ್ದಾರೆ. ಇದು ಜನನ ಮನೋವಿಜ್ಞಾನದ (Genetic psychology) ಹೆಸರಿನಲ್ಲಿ ಮನೋವಿಜ್ಞಾನದ ಒಂದು ಶಾಖೆಯಾಗಿದೆ. ಇದರಲ್ಲಿ ಆನುವಂಶೀಯತೆಯ ವಿಚಾರವಾಗಿ ವಿಮರ್ಶೆಯು ದೊರೆಯುತ್ತದೆ. ತಂದೆತಾಯಿಗಳ ವಿಶೇಷ ಗುಣಗಳು ಯಾವ ರೀತಿಯಲ್ಲಿ ಅವರ ವಂಶಜರಲ್ಲಿ ಕಂಡುಬರುತ್ತವೆ ಎನ್ನುವುದೇ ಈ ಶಾಖೆಯ ಮುಖ್ಯವಾದ ವಿಷಯ. ಇದನ್ನು ಓದುವುದರಿಂದ ಜನರು ವೈಜ್ಞಾನಿಕ ರೀತಿಯಲ್ಲಿ ಸ್ವಲ್ಪಮಟ್ಟಿಗಾದರೂ ವಿಕಾಸವಾದವನ್ನು ಅರಿತುಕೊಳ್ಳಬಹುದು.

ಕಲಿಕೆ (Learning) ಎಂಬ ಇನ್ನೊಂದು ಶಾಖೆಯಲ್ಲಿ ಪ್ರಾಣಿಗಳ ಮೌಖಿಕ ಮತ್ತು ಗತ್ಯಾತ್ಮಕ ಕ್ರಿಯೆಗಳನ್ನೂ 'ಕಲಿಕೆ' ಎಂದು ಭಾವಿಸುವುದು ರೂಢಿಯಲ್ಲಿದೆ. ಇಂತಹ ಕಲಿಕೆಯು ಯಾವ ರೀತಿಯಲ್ಲಿ ನಡೆಯುವುದೆಂದು ಪರೀಕ್ಷಿಸುವುದು ಕಲಿಕೆಯ ಮನೋವಿಜ್ಞಾನಿಗಳ ಕರ್ತವ್ಯವಾಗಿದೆ. ಕಲಿಕೆಯ ಕ್ಷೇತ್ರದಲ್ಲಿ ಅನೇಕ ಸಿದ್ಧಾಂತಗಳೂ ಬೆಳೆದಿವೆ. ಪ್ರಾಣಿಗಳು ಕಲಿತುಕೊಳ್ಳುವುದರಲ್ಲಿ ತೋರಿಸುವ ದಕ್ಷತೆ, ಕಲಿಕೆಗೆ ಅನುಕೂಲವಾದ ಸನ್ನಿವೇಶಗಳು, ಹೊಸದಾಗಿ ಕಲಿತ ಅಂಶವನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದಕ್ಕೆ ಅನುಕೂಲವಾದ ಪರಿಸ್ಥಿತಿ, ಒಂದು ವಿಧವಾದ ಕಲಿಕೆಯು ಇನ್ನೊಂದು ವಿಧದ ಕಲಿಕೆಗೆ ಸಹಾಯವಾಗುತ್ತದೆಯೋ ಎನ್ನುವ ಸಮಸ್ಯೆ, ಕಲಿಕೆಯಲ್ಲಿ ದಕ್ಷತೆಯನ್ನು ಯಾವ ರೀತಿಯಲ್ಲಿ ಹೆಚ್ಚಿಸಬಹುದು ಎಂಬ ಸಮಸ್ಯೆ, ಇವೇ

ಮೊದಲಾದ ಅಂಶಗಳ ವಿಶ್ಲೇಷಣೆಯು ಕಲಿಕೆಯ ಕ್ಷೇತ್ರದಲ್ಲಿ ನಡೆಯುತ್ತದೆ. ಕಲಿಕೆಯ ಸಿದ್ಧಾಂತಗಳನ್ನು ಸಾಧಿಸಬೇಕಾದರೆ ಗಣಿತಶಾಸ್ತ್ರದ ಸಹಾಯವನ್ನು ತೆಗೆದುಕೊಂಡಿದ್ದಾಗಿದೆ. ಇತ್ತೀಚೆಗೆ ಗಣಿತ–ಮನೋವಿಜ್ಞಾನವೂ ಮನೋವಿಜ್ಞಾನದ ಒಂದು ಶಾಖೆಯಾಗಿ ರೂಪುಗೊಂಡಿದೆ. ಚೋದನೆ (Drive) ಮತ್ತು ಅಭಿಪ್ರೇರಣೆಗಳು (Motivation) ಕಲಿಕೆಯ ಪ್ರಕ್ರಿಯೆಯಲ್ಲಿ ವಹಿಸುವ ಪಾತ್ರವನ್ನೂ ಸಿದ್ಧಾಂತಗಳಲ್ಲಿ ಅನೇಕರು ವಿಮರ್ಶಿಸಿದ್ದಾರೆ. ಅಭಿಪ್ರೇರಣೆಯ ಕ್ಷೇತ್ರದಲ್ಲಿ ಸಂಶೋಧನೆಗಳ ಸಂಖ್ಯೆಯು ಹೆಚ್ಚಿ ಅದು ಈಗ ಒಂದು ಪ್ರತ್ಯೇಕವಾದ ಶಾಖೆಯಾಗುವ ಪರಿಸ್ಥಿತಿ ಒದಗಿದೆ ಎಂದು ಮನೋವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ.

ಇದುವರೆಗೂ ಮನೋವಿಜ್ಞಾನದ ಕೆಲವು ಶಾಖೆಗಳ ವಿಚಾರವಾಗಿ ಒಂದು ಸ್ಥೂಲ ಪರಿಚಯವನ್ನು ಕೊಟ್ಟಿದ್ದಾಯಿತು. ಮನೋವಿಜ್ಞಾನದ ವಿಷಯದಲ್ಲಿ ಹೆಚ್ಚಾಗಿ ಅಂಶಗಳನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ಕೂಡಿರುವ ವ್ಯಕ್ತಿಗಳು ಅನೇಕ ಶಾಖೆಗಳಲ್ಲಿ ಪ್ರಕಟವಾಗಿರುವ ಗ್ರಂಥಗಳನ್ನು ಓದುವುದರಿಂದ ಜ್ಞಾನಾರ್ಜನೆಯನ್ನು ಮಾಡಬಹುದು. ನಮ್ಮ ದೇಶದಲ್ಲಿ ಮನೋವಿಜ್ಞಾನದ ಕ್ಷೇತ್ರದಲ್ಲಿ ನಡೆಯುತ್ತಿರುವ ಸಂಶೋಧನೆಗಳ ವರದಿಗಳು ನಮ್ಮ ದೇಶದಲ್ಲಿಯೇ ಮುದ್ರಿತವಾಗುತ್ತಿರುವ ನಿಯತಕಾಲಿಕಗಳಲ್ಲಿ ವರದಿಯಾಗುತ್ತಿವೆ. ಇವುಗಳನ್ನು ಓದಬಹುದು. ಇದರ ಜೊತೆಗೆ ಹಿಂದೂ ಮನೋವಿಜ್ಞಾನದ (Indian psychology) ಮೇಲೆ ಸಿನ್ಹಾ ಮೊದಲಾದವರಿಂದ ಬರೆಯಲ್ಪಟ್ಟಿರುವ ಗ್ರಂಥಗಳನ್ನು ಓದುವುದರಿಂದ ನಮ್ಮ ದೇಶದಲ್ಲಿ ಮನೋವಿಜ್ಞಾನದ ಕ್ಷೇತ್ರವನ್ನು ಬೆಳೆಸುವುದಕ್ಕೆ ಎಷ್ಟರಮಟ್ಟಿಗೆ ಅವಕಾಶವಿದೆ ಎಂಬ ವಿಷಯವನ್ನೂ ನಿರ್ಧರಿಸಬಹುದು.

# ಸಾಹಿತ್ಯವಾಹಿನಿ



ಪ್ರತಿಯೊಂದು ಪುಸ್ತಕದ ಬೆಲೆಯೂ ಐವತ್ತು ಪೈಸೆ

---


ಡಿ. ವಿ. ಕೆ. ಮೂರ್ತಿ : ಪ್ರಕಾಶಕರು : ಮೈಸೂರು-೪